# ಶ್ರೀ ಸಂಗಮನಾಥನ ವಚನಗಳು

‘ ಶಿವಕವಿ ’

ಸಂಗಮೇಶ ಹೊಸಮನಿ

ಹುನಗುಂದ

೧೯೭೨

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ನಂ. ೪೦

# ಶ್ರೀ ಸಂಗಮನಾಥನ ವಚನಗಳು

'ಶಿವಕವಿ'

ಸಂಗಮೇಶ ಹೊಸಮನಿ

ಹುನಗುಂದ

೧೯೭೨

ವಚನಕಾರರು :

'ಶಿವಕವಿ' ಸಂಗಮೇಶ ಹೊಸಮನಿ, ಹುನಗುಂದ

ಆಶೀರ್ವಚನ :

ಶ್ರೀ ನಿ. ಪ್ರ. ಶ್ರೀ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರುಸಾವಿರಮಠ, ಹುಬ್ಬಳ್ಳಿ



ಅಭಿಪ್ರಾಯ :

ಶ್ರೀ ನಿ. ಪ್ರ. ಶ್ರೀ ಶ್ರೀ ಸದಾಶಿವ ಮಹಾಸ್ವಾಮಿಗಳವರು, ಹಾನಗಲ್ಲ

ಮುನ್ನುಡಿ :

ಶ್ರೀ ನಿ. ಪ್ರ. ಶ್ರೀ ಶ್ರೀ ಮಹಾಂತ ಸ್ವಾಮಿಗಳವರು, ಸಂಸ್ಥಾನಮಠ, ಚಿತ್ತರಗಿ – ಇಲಕಲ್ಲ

ಪ್ರಕಾಶಕರು :

ಹುಬ್ಬಳ್ಳಿ ಮೂರುಸಾವಿರಮಠದ
ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ಪೀಠಾರೋಹಣ ದ್ವಾದಶ ವಾರ್ಷಿಕ ಮಹೋತ್ಸವ ಸಮಿತಿ, ಹುಬ್ಬಳ್ಳಿ



ಪ್ರತಿಗಳು :

ಒಂದು ಸಾವಿರ– ೧೯೭೨

ಮುದ್ರಣ :

ಶ್ರೀ ಜ್ಞಾನೇಶ್ವರ ಮುದ್ರಣಾಲಯ, ಹುಬ್ಬಳ್ಳಿ

ಬೆಲೆ :— ೨-೫೦

## ಸಮರ್ಪಣೆ

ವಚನಪಿತಾಮಹ

ಲಿಂ. ಫ. ಗು. ಹಳಕಟ್ಟಿ

ಹಾಗೂ

ಲಿಂ. ಸಿ. ಸಿ. ಬಸವನಾಳ

ಅವರ

ಆತ್ಮಶ್ರೀಗೆ

— ಸಂಗಮೇಶ ಹೊಸಮನಿ

# ವಿಷಯ ಸೂಚಿ



ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರ ಮಠ ಹುಬ್ಬಳ್ಳಿ



"ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರುಗಳ ಅಮೃತ ಹಸ್ತದಿಂದ ಇಲಕಲ್ಲ ವಿಜಯ ಮಹಾಂತೇಶ ಮಠದ ಪರವಾಗಿ ಹೊಸಮನಿ ಸಂಗಮೇಶರಿಗೆ "ಶಿವಕವಿ" ಪ್ರಶಸ್ತಿ ದಿ. ೨೪-೧೧-೧೯೭೧



"ಶಿವಕವಿ" ಸಂಗಮೇಶ ಹೊಸಮನಿ

# ಅರಿಕೆ

ಬಹು ದಿನಗಳಿಂದ ನಡೆದು ಬಂದ ಸಾಹಿತ್ಯದ ಅಳಿಲು ಸೇವೆ-ಯನ್ನು ಕವನ ರೂಪದಲ್ಲಿ ಮಾಡುತ್ತಿದ್ದ ಹೃದಯ ಏಕಾಏಕಿ, ವಚನ-ಗಳನ್ನು ಬಯಸತೊಡಗಿದೆ. ಈ ಒಡಭಕ್ತನ ಬಯಕೆ ಕೂಡಲ ಸಂಗಮ ನಾಥನಿಗೆ ಕೇಳಿಸಿತೆಂಬಂತೆ ಮೊಟ್ಟಮೊದಲಿಗೆ ಕರುಣಾಮಯ ಪರಮ ಪೂಜ್ಯ ಶ್ರೀ ಶ್ರೀ ಮಹಾಂತಸ್ವಾಮಿಗಳವರ (ಚಿತ್ತರಗಿ–ಇಲಕಲ್ಲ) ಅಂತಃಕರಣದ ಹರಕೆಯಾಯಿತು. ಗುರುದೇವ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಜಗದ್ಗುರುಗಳವರ (ಮೂರುಸಾವಿರ ಮಠ, ಹುಬ್ಬಳ್ಳಿ) ಎಂದಿನ ಕೃಪಾಪೂರ್ಣ ಆಶೀರ್ವಾದವು ಕೈಗೂಡಿ ಮೈಗೂಡಿ ಬಂದಿತು!

ಅಂತೆಯೇ ತಿಂಗಳೊಪ್ಪತ್ತಿನಲ್ಲಿ ವಚನಗಳ ರಚನೆಯಾಯಿತು. ಕೈಮಾಡಿ ಕರೆದು, ಕೈಹಿಡಿದು ಬರೆಯಿಸುತ್ತಿರುವ ಈ ಆಟ, ಬರೆದವನನ್ನು ಬೆರಗುಗೊಳಿಸುತ್ತಲಿದೆ.

ಸುಖ–ದುಃಖ, ನೋವು–ನಲಿವುಗಳನ್ನು ಕಂಡುಂಡು ಎದೆದುಂಬಿ ಹಾಡುವವದರಲ್ಲಿ ಒಂದು ಸೊಗಸೆನಿಸಿದೆ, ಆನಂದವೆನಿಸಿದೆ. 'ಪಟ್ಟಪಾಡು ಹಾಡಾಗಿ' ಹರಿದು ಬಂದಿತೆನ್ನುವದರಲ್ಲಿ ಸಹಜತೆಗೆ ಸಮೀಪಿಸುತ್ತಲಿರುವೆ ಎನಿಸುತ್ತದೆ. ಅದೆಲ್ಲವೂ ಗುರುದೇವರ ಕರುಣೆ, ಮಹೇಶ್ವರಿಯ ಕೃಪೆ!

ಸಾಗಿ ಬಂದ ವಚನಗಳನ್ನು ಅಪ್ಪಿಕೊಂಡು, ಒಪ್ಪಿಕೊಂಡು ಜಗದ್ಗುರು ಗ್ರಂಥಮಾಲೆಯಿಂದ ದ್ವಾದಶ ಮಹೋತ್ಸವದ ದಿವ್ಯ ಸಂದರ್ಭದ ಸ್ಮರಣೆಗಾಗಿ ಪ್ರಕಾಶನ ಪಡಿಸಲು ಅಪ್ಪಣೆ ಕೊಡಿಸಿದ್ದಾರೆ– ಜಗದ್ಗುರು ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು. ಅಲ್ಲದೆ ಹೃದಯದ ಹರಕೆಯಾಗಿ ಈ ವಚನ ಸಂಗ್ರಹಕ್ಕೆ ಆಶೀರ್ವಚನವನ್ನು ದಯಪಾಲಿಸಿದ್ದಾರೆ. ಪರಮ ಪೂಜ್ಯರ, ಈ ಚಿನ್ನುಡಿ, ಹೊನ್ನುಡಿ ಹೃದಯದ ಕನ್ನಡಿಯಾಗಿ ಹೊನ್ನು ಕಳಸವಾಗಿದೆ!

ಶಿವಯೋಗಿವರೇಣ್ಯ ಶ್ರೀ ಶ್ರೀ ಸದಾಶಿವ ಮಹಾಸ್ವಾಮಿಗಳು (ಹಾನಗಲ್ಲ) ಅವರ ಅಭಿಪ್ರಾಯ, ವೈರಾಗ್ಯನಿಧಿ ಶ್ರೀ ಶ್ರೀ ಮಹಾಂತ

ಸ್ವಾಮಿಗಳು ( ಚಿತ್ತರಗಿ—ಇಲಕಲ್ಲ )ಅವರ ಪ್ರಸ್ತಾವನೆ, ವಚನಗಳಿಗೆ ಸುವರ್ಣದ ಜ್ಞಾಕಟ್ಟನ್ನು ದಯಪಾಲಿಸಿದೆ. ಈ ತ್ರಿವೇಣಿ ಸಂಗಮದ ಸಾನ್ನಿಧ್ಯಕ್ಕೆ ಕವಿಯ ಅನಂತಾನಂತ ದೀರ್ಘದಂಡ ಪ್ರಣಾಮಗಳು.

ವಚನ ಕುಸುಮಗಳರಳುವಾಗ, ಹಸ್ತಪ್ರತಿಯನ್ನು ಬರೆಯುವಾಗ ಒಲುಮೆಯಿಂದ ಹೃತ್ಪೂರ್ವಕ ನೆರವಾದ ಗೆಳೆಯ ಶ್ರೀ ದೇವೇಂದ್ರ ಮಾಧವನರ, ಬಿ. ಎ. (ಆನರ್ಸ), ಬಿ. ಈಡಿ., ಅಣ್ಣ ಶ್ರೀ ಸಿಂಪಿ ಲಿಂಗಣ್ಣನವರು ಚಡಚಣ, ಶ್ರೀ ಕಲ್ಲೂಗ ಸಂಗಣ್ಣ ಕನ್ನಡ ವಿದ್ವಾನ್, ಶ್ರೀ ಶಿ. ಜ. ಚನ್ನಪ್ಪಗೌಡರ ಬಿ.ಎಸ್.ಸಿ., ಎಂ. ಎ., ಶಾಂತಿ ಸಾಹಿತ್ಯ ಪ್ರಕಾಶನದ ಸಂಪಾದಕ ಗೆಳೆಯರಾದ ಶ್ರೀ ಬಿ. ಎಮ್. ಮಾಗಿ ಎಂ. ಎ., ಶ್ರೀ ಬಸವರಾಜ ತೆಗ್ಗಿನಮಠ ಹುನಗುಂದ ಇವರ ಹಾರ್ದಿಕತೆಗೆ, ಅಲ್ಲದೆ ನನ್ನ ಯಾವತ್ತು ಸಾಹಿತಿ—ಬಂಧುಗಳ ಅನುರಾಗಕ್ಕೆ ಋಣಿ-ಯಾಗಿದ್ದೇನೆ.

ಸಕಾಲಕ್ಕೆ ಸುಂದರವಾಗಿ ಮುದ್ರಿಸಿಕೊಟ್ಟ ಹುಬ್ಬಳ್ಳಿಯ ಜ್ಞಾನೇಶ್ವರ ಮುದ್ರಣಾಲಯದ ಒಡೆಯರಿಗೆ ಹಾಗೂ ಸಿಬ್ಬಂದಿ ವರ್ಗಕ್ಕೆ ಧನ್ಯವಾದಗಳು.

ದಿನಾಂಕ ೪—೪—೧೯೭೨

ಸಂಗಮೇಶ ಹೊಸಮನಿ
ಹುನಗುಂದ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ

# ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು

## ಮೂರುಸಾವಿರ ಮಠ, ಹುಬ್ಬಳ್ಳಿ ಅವರ

# ಆಶೀರ್ವಚನ

'ಶಿವಕವಿ' ಹೊಸಮನಿ ಸಂಗಮೇಶ ಅವರು, ಹೊಸ ವಿಚಾರದ ಹೊಸ ಹೆಜ್ಜೆಯಲ್ಲಿ ಹೊಸ ಜೀವನವನ್ನು ರೂಪಿಸುತ್ತಲಿದ್ದಾರೆ. ಬುದ್ಧಿ ಬೆಳಗಿನಲ್ಲಿ ಶುದ್ಧಿ ಕಾಣಲು ಆತುರರಾಗಿದ್ದಾರೆ. ಕಂಡು, ಕೇಳಿ ನಮಗೆ ತುಂಬ ಸಂತಸವನ್ನುಂಟು ಮಾಡಿದೆ. ಕವಿ ಹೃದಯ ಕವಿಗೆ ಅರ್ಥವಾದಷ್ಟು ಬೇರೊಬ್ಬರರಿಯುವದು ಸ್ವಲ್ಪ ಕಠಿಣ. ಅವರ ಹೃದಯ ಕವಿ ಸಹಜ ಜೀವನ ವಚನ ರಚನೆಗೆ ಮನಸ್ಸು ಮಾಡಿದ್ದಾಗಿದೆ. ಅಷ್ಟೇ ಅಲ್ಲ, ಸ್ವಲ್ಪ ದಿನಗಳಲ್ಲಿಯೇ ವಚನಗಳ ರಚನೆಯಲ್ಲಿ ಪಳಗಿಬಿಟ್ಟಿದ್ದಾರೆ. ಜೀವನವನ್ನು ಸಾರ್ಥಕ ಮಾಡಿಕೊಂಡಿದ್ದಾರೆ. ಕವಿ–ಹೃದಯದವರಿಗೆ ವಚನ ರಚನೆ ಸುಲಭ. ಹೃದಯದಲ್ಲಿ ತುಂಬಿದ ಹಾಡು–ವಚನವಾದರೆ ಅದು ಮನಸ್ಸಿಗೆ ಮುಟ್ಟುವದಲ್ಲದೆ, ಅನ್ಯರನ್ನೂ ಸಂತೃಪ್ತಿಗೊಳಿಸುತ್ತದೆ. ಭಾವಭೂಮಿಯ ಮೇಲೆ ಸದ್ವಿಚಾರಗಳ ಬೀಜವನ್ನು ಬಿತ್ತಿದರೆ, ಫಲ ಪುಷ್ಪಗಳನ್ನೀಯುವದು ಬಿಡುವದೆ ? ಹಸನು ಮಾಡಿ ಬಿತ್ತಿದ ಭೂಮಿಗೆ ನೀರು ಹಣಿಸಿದರೆ, ಮೊಳಕೆಯೊಡೆಯದೆ ಬಿಡುವದೆ ? ಜೀವನ-ಸಾಗರದಲ್ಲಿ ಈಸಿ, ಕಡುತರ ಕಷ್ಟದಲ್ಲಿ ಬೆಂದು–ಬೆಂಡಾಗಿ, ಶಿಕ್ಷಕ ವೃತ್ತಿಯಲ್ಲಿದ್ದರೂ, ಕವಿ ಜೀವನದ ಶಿವ-ಸುಖವನ್ನು ಪಡೆಯುತ್ತ, ಆನಂದದಿಂದ ಕಾಲವನ್ನು ನೂಕುತ್ತಿದ್ದಾರೆ– ಶಿವಕವಿ ಹೊಸಮನಿ ಸಂಗಮೇಶರು. ನಮಗೆ ಬಾಲ್ಯದಿಂದಲೂ ಪರಿಚಿತರು. ಭಾವ ಜೀವಿಗಳು. ನಮ್ಮೀರ್ವರ ವಿಚಾರಗಳು ಒಂದೇ ಬಗೆಯಲ್ಲಿ, ಒಂದೇ ಭಾವದಲ್ಲಿ ಒಡಮೂಡುತ್ತವೆ. ಅವರ ಕಷ್ಟಮಯ ಜೀವನದಲ್ಲಿಯೂ ಸಿಹಿ ಜೇನು ಸುರಿಸಿ ಆನಂದಪಡುತ್ತಿದ್ದೆವು. ಸುಖಕ್ಕಿಂತ ದುಃಖದಲ್ಲಿ ಬರೆದ ಕವಿತೆ ಹೃದಯ ಮುಟ್ಟುತ್ತದೆ, ತಟ್ಟುತ್ತದೆ, ಕಣ್ಣೀರು ಸುರಿಸುತ್ತದೆ. ಕಂಬನಿ ಸುರಿಸಿ ಬರೆದ ಕವನ, ಅಥವಾ ವಚನ ಬಹುದಿನ ಉಳಿಯುತ್ತದೆ.

ಬೆಳಗುತ್ತದೆ. ವಾಸನೆಯಿಂದ ಹೂವಿನ ಅರಿವಾಗುವಂತೆ, ಕವಿತೆಯಿಂ ಕವಿಗಳ ಹೃದಯದ ಅಂತರಂಗ, ಅವರ ದೂರದೃಷ್ಟಿ, ಸಮಾಜದ ಕಳಕಳಿ, ನ್ಯಾಯ-ಅನ್ಯಾಯದ ಅರಿವು ಅರ್ಥವಾಗುತ್ತವೆ.

ಹೊಸಮನಿಯವರ ಕವಿಜೀವನ ಹೃದಯವಂತಿಕೆಯಿಂದ ಕೂಡಿ ಪರಿಪಕ್ವವಾಗಿದೆ. ಭಾವಬಂಧುರವಾಗಿದೆ, ಹಚ್ಚಹಸಿರು ಜೀವನವಾಗಿದೆ. ಕವಿಗೆ ಬೇಕಾದುದು ಮೊದಲು ಹೃದಯ, ನಂತರ ಭಾಷೆ. ಇವರು ಭಾಷೆಗಿಂತಲೂ ಭಾವಕ್ಕೆ, ಹೃದಯವಂತಿಕೆಗೆ ಹೆಚ್ಚು ಮಹತ್ವ ನೀಡಿದ್ದಾರೆ. ಭಾಷೆಯು ಪ್ರೌಢವಾಗಿದ್ದು ಹೃದಯವಿಲ್ಲದಿದ್ದರೆ, ಕಲ್ಲಿನ ಮೇಲೆ ನೀರೆರೆದಂತೆ. ಬಂಗಾರವಿಲ್ಲದೆ ಆಭರಣವೇತು ? ಮಣ್ಣಿಲ್ಲದೆ ಮಡಿಕೆಯಾಗುವುದೆ ! ಒಂದು ಬಿಟ್ಟು ಒಂದು ಆಗದಾದರೂ ಹೃದಯವಂತಿಕೆ ಮೊದಲು ಬೇಕು. ಅಂತಹ ಮೃದುಹೃದಯವನ್ನು ಶ್ರೀ ಸಂಗಮೇಶರು ಸಂಗಮ ನಾಥನ ಕೃಪೆಯಿಂದ ಪಡೆದಿದ್ದಾರೆ. ಅಂತಹುದೇ ಹೃದಯ ಕಾಣಿಕೆಯಾಗಿ ನೂರೊಂದು ವಚನಗಳನ್ನು ಬರೆದು ಸಲ್ಲಿಸಿದ್ದಾರೆ. ಸಂಗಮನಾಥನನ್ನು ಹೃದಯದುಂಬಿ ಹಾಡಿದ್ದಾರೆ. ಸಂಗಮನಾಥನೇ ಅವರ ಹೃದಯ ಮೂರ್ತಿ ! ಮಾನವನಿಗೆ ಮಾನವೀಯತೆಯನ್ನು ನೀಡಿ, ವೀರಶೈವ ಸಮಾಜವನ್ನು ಉದ್ಧರಿಸಿ, ಮಹಾತ್ಮರಾಗಿ, ಕನ್ನಡ ಕುಲದೀಪಕನಾಗಿ, ಕೂಡಲ ಸಂಗಮನಾಥನಲ್ಲಿ ಬೆರೆದ ಜಗಜ್ಯೋತಿ ಬಸವೇಶ್ವರನ ಆ ಹೆದ್ದಾರಿಯಲ್ಲಿ ಸಾಗುವ ಮಹದಾಸೆಯನ್ನಿಟ್ಟು ವಚನ ಸಿರಿಗಂಗೆಯಲ್ಲಿ ಈಸುತ್ತಿದ್ದಾರೆ. ತುಂಬಾ ಸಂತಸ. ಸಂತಸವೀಯುವ ಸುಯೋಗವಿದು !

ಇವರ ವಚನಗಳನ್ನು ಓದುತ್ತಾ ಹೋದಂತೆ, ಹನ್ನೆರಡನೆಯ ಶತಮಾನದ ಶರಣರ ವಚನಗಳ ನೆನಪು ತಂದುಕೊಡುತ್ತದೆ. ಅದೇ ತೆರನಾಗಿ ರಚಿಸಿದ್ದಾರೆ. ಶರಣರ ವಚನಗಳು ಪಿಂಡಸ್ಥಲದಿಂದ ಹಿಡಿದು ಐಕ್ಯಸ್ಥಲದ ವರೆಗೆ ಸ್ಥಲಕಟ್ಟನ್ನು ಅನುಸರಿಸಿ ಬರೆದರೆ, ಇವರು ಇಂದಿನ ಸಾಮಾಜಿಕ ರೀತಿ, ನೀತಿಗಳನ್ನು ನೋಡಿ ವ್ಯಕ್ತಿಗತ ನೋವು-ನಲಿವುಗಳನ್ನು ಅನುಭವಿಸಿ. ಭಾವದುಂಬಿ ಚಿತ್ರಿಸಿದ್ದಾರೆ. ಕಲ್ಪನಾಲೋಕದಲ್ಲಿ ವಿಹರಿಸಿ, ಕಲ್ಪಿತ ವಸ್ತುಗಳನ್ನು ಚಿತ್ರಿಸಿ, ಮಹದ್ವಿಚಾರಗಳನ್ನು ಸಂಕಲ್ಪಿಸಿ, ತೆರೆದ

ಹೃದಯದಿಂದ ಓದುಗರ ಮನಸ್ಸನ್ನು ಆಕರ್ಷಿಸಿದ್ದಾರೆ. ಇವರಿಗೆ ಕೃತ್ರಿಮತೆ ಸೇರದು, ಕೃತ್ರಿಮತೆಯನ್ನು ಕಂಡು ತಿಳಿಹೇಳಿ ಅವರನ್ನು ಎಚ್ಚರಿಸಿದ್ದಾರೆ. ಎಚ್ಚರ ನೀಡುವಲ್ಲಿಯೂ ಸಂಗಮನಾಥನನ್ನು ಪ್ರಾರ್ಥಿಸಿ-ಕೊಂಡು ಬರೆದಿದ್ದಾರೆ. ಇವರ ಕರುಳ ಕರೆಯು ನರಳುವವರನ್ನು ಸಂತೈಸಿದೆ. ಬುದ್ಧಿವಂತರೆನಿಸಿಕೊಳ್ಳುವವರಿಗೂ ತಿಳಿವಳಿಕೆ ನೀಡುವದು ಇವರ ವಚನಗಳಲ್ಲಿ ಎದ್ದು ಕಾಣುತ್ತದೆ. ಸದ್ಭಾವ-ಸಂಗಮ ಜೀವನದಲ್ಲಿ ಕಲ್ಯಾಣವನ್ನು ಬಯಸಿ, ಕತ್ತಲೆಯಿಂದ ದೂರ ಸರಿದು, ಬೆಳಕನ್ನೆ ಯಾಚಿ-ಸುತ್ತ ಅಹೋರಾತ್ರಿ ಪರಿಶ್ರಮಿಸಿ, ಮುತ್ತಿರುವ ಭಯವು ಓಡುವಂತೆ ದೇವನಲ್ಲಿ ಮೊರೆಯಿಟ್ಟಿದ್ದಾರೆ.

ಇವರ ವಚನಗಳಲ್ಲಿ ಭಕ್ತಿಯಿದೆ, ಶಕ್ತಿಯಿದೆ, ಹೃದಯಕ್ಕೆ ಸಂವೇದ್ಯವಾಗತಕ್ಕ ಸವಿಗಾರಿಕೆಯಿದೆ. ಈ ವಚನಗಳನ್ನು ನಿರುಕಿಸಿ ನೋಡಿದಾಗ ಅರ್ಥವಾಗದಿರದು.

"ಪ್ರಣತಿಗೆ ತೈಲದ ಸ್ನೇಹಯೋಗ,
ತೈಲಕ್ಕೆ ಬತ್ತಿಯ ಸ್ನೇಹಯೋಗ,
ಬತ್ತಿಗೆ ಜ್ಯೋತಿಯ ಸ್ನೇಹಯೋಗ,
ನಂದಾದೀಪಕ್ಕೆ ನಿಮ್ಮ ಸ್ನೇಹದ ಯೋಗಾಯೋಗವಯ್ಯ !
ಕವಿಗೆ ನಿಮ್ಮ ಕರುಣೆಯ ಮಹಾಯೋಗವನ್ನಿತ್ತು,
ಹೃದಯದೇಗುಲದಲ್ಲಿ ಬೆಳಗಿಸು ಶ್ರೀ ಸಂಗಮನಾಥ"

ಇದು ಅವರ ಮೊದಲನೆಯ ವಚನ, ಇಲ್ಲಿ ವಚನಕಾರರಿಗೆ ಬೇಕಾದುದು ಮೊದಲು ದೇವರ ಕರುಣೆ. ದೇವಕೃಪೆಯಿರದೆ ಏನು ಮಾಡಲೂ ಅಸಾಧ್ಯ. 'ಭಕ್ತಿರಸವ ದಣಿಯೆ ಪೋಯಿಸಿ, ಸುಬುದ್ಧಿಯೆಂಬ ಉದಕವ-ನೆರೆದಾಗ, ದೇವರ ಮೆಚ್ಚುಗೆ, ಎಂಬುದನ್ನರಿತ ಸಂಗಮೇಶರು ಶ್ರೀ ಸಂಗ-ಮನಾಥನನ್ನು ಕುರಿತು 'ನಿಮ್ಮ ಕರುಣೆಯ ಮಹಾಯೋಗವನ್ನಿತ್ತು ಹೃದಯದೇಗುಲದಲ್ಲಿ ಬೆಳಗಿಸು' ಎಂದು ಪ್ರಾರ್ಥಿಸಿದ್ದಾರೆ. ಒಂದೋದಕ್ಕೆ ಒಂದೋದು ಸ್ನೇಹಯೋಗವಿದ್ದರೆ ಮಾತ್ರ ಅವುಗಳ ಶಕ್ತಿ-ಸಂವರ್ಧನೆ

ಆಗುವುದಲ್ಲದೆ, ಬೆಳ್ಬೆಳಗಿಗೆ ಕಾರಣವಾಗುತ್ತದೆ, ಸ್ನೇಹ ಪಲ್ಲವಿಸುತ್ತದೆ. ಅದೇ ತೆರನಾಗಿ ಉಪಮೆಗಳನ್ನು ನೀಡಿ ತಮ್ಮ ಭಾವವನ್ನು ಎತ್ತರಿಸಿದ್ದಾರೆ. ಮಹಾಯೋಗಕ್ಕೆ ಅಂಗಲಾಚಿ ಬೇಡಿಕೊಂಡಿದ್ದಾರೆ.

ಪ್ರಾರ್ಥನೆಯು ಮನುಷ್ಯನನ್ನು ನಿಜ-ಸುಖದತ್ತ ಒಯ್ಯುವ ಕೈದೀವಿಗೆ. ಪ್ರಾರ್ಥನೆಯ ಬಲದಿಂದ ಏನನ್ನಾದರೂ ಮಾಡಬಹುದು. ನಿಷ್ಕಲ್ಮಷ ಹೃದಯದಿಂದ ಮಾಡಿದ ಪ್ರಾರ್ಥನೆಗೆ ದೇವರು ಕಿವಿಗೊಡುತ್ತಾನೆ ಮಾತ್ರವಲ್ಲ, ಸಂಕಷ್ಟಗಳನ್ನು ನಿವಾರಿಸುತ್ತಾನೆ. ಸದ್ಭಾವನೆಯಿಂದ ಕೂಡಿದ ಪ್ರಾರ್ಥನೆಗಿಂತ ಮಿಗಿಲಾದುದು ಬೇರೊಂದಿಲ್ಲ. ಅಂತಃಕರಣದ ಮಹಾ ರೂಪವಾದ ಪ್ರಾರ್ಥನೆ, ಮಾನವನನ್ನು ಎಚ್ಚರಿಸುತ್ತದೆ. ಎಚ್ಚರಿಕೆ ಬಾಳ್ಬೆಳಕಿಗೆ ದಾರಿದೀಪವಾಗುತ್ತದೆ. ಅನೇಕ ಕಟು ಅನುಭವಗಳನ್ನು ಪಡೆದ ಹೊಸಮನಿ ಸಂಗಮೇಶರು, ಪ್ರಾರ್ಥನೆಯ ಬಲದಿಂದ ಜೀವನವನ್ನು ಚೇತರಿಸಿಕೊಳ್ಳಬೇಕೆಂದು ಶ್ರೀ ಸಂಗಮನಾಥನಲ್ಲಿ ಹೃದಯಾರೆ ಮಣಿದು ಕಾರುಣ್ಯ ಕಿರಣವನ್ನು ಕರುಣಿಸೆಂದು ಮನದುಂಬಿ ಕೇಳಿಕೊಂಡಿದ್ದಾರೆ. “ಕುರುಡ ಬೆಳಕಿನೋಳಿದ್ದಂತೆ, ಒಗೆಯುವ ಆಗಸ ನೀರಡಿಸಿದಂತೆ” ಎಂದು ತಮ್ಮ ಸ್ಥಿತಿಯನ್ನು ತೋಡಿಕೊಂಡು ಸಂಗಮನಾಥನನ್ನು ಬೇಡಿಕಾಡಿದ್ದಾರೆ, ‘ನನ್ನೊಳಗೆ ನೀನಿದ್ದು ಸಂರಕ್ಷಿಸೆ’ಂದು ನಗೆದುಂಬಿ, ಬಗೆದುಂಬಿ, ಎದೆದುಂಬಿ ಹಾಡಿದ್ದಾರೆ. ಮತ್ತೊಂದು ವಚನದಲ್ಲಿ ಇದೇ ಭಾವವನ್ನು ಮತ್ತಿಷ್ಟು ಸ್ಪಷ್ಟೀಕರಿಸಿದ್ದಾರೆ:

“ತಾಯಿಯೊಲುಮೆಯೊಳಿದು ಎದೆಜೇನನಿತ್ತೆ,
ತಂದೆಯೊಳು ಮುಂದಾಗಿ ಬಲ ಎದೆಯನಿತ್ತೆ,
ಗುರುವಿನೊಳು ಗುರುವಾಗಿ ದರ್ಶನವ ನೀಡಿದೆ,
ಆಪ್ತ-ಮಿತ್ರರ ಸ್ನೇಹ ಸುಳುವಿನೊಳು ಕಂಡೆ,
ಎಲ್ಲರೆದೆ–ಮಲ್ಲಿಗೆಗೆ ಮಕರಂದ ನೀನಾದೆ,
ಮರಿದುಂಬಿ ಕವಿಗಾಗಿ ಕರುಣೆ ನೀಡಿದ ತಂದೆ,
ನಿಮ್ಮ ಉಪವನದಲ್ಲಿ ‘ಗುಂಯ್‌ಗುಡು’ವ ದುಂಬಿಯನು
ಹಾಯಾಗಿ ಹಾರಾಡಿಸಯ್ಯ ಶ್ರೀ ಸಂಗಮನಾಥ ॥

ಭಕ್ತಿಗೆ ಬಡತನ ಸಿರಿತನ ಬೇಕಿಲ್ಲ. ಎಲ್ಲಿ ಭಕ್ತಿಭಾವ ಬೆಳೆಯಿತೋ ಅಲ್ಲಿಯೇ ಸಿರಿತನದ ಸೊಗಸನ್ನು ಕಾಣಬಹುದು. ಬಡವನಲ್ಲಿರುವ ಮೃದು ಹೃದಯದ ಭಕ್ತಿ ಸಿರಿವುಳ್ಳವರಲ್ಲಿ ಕಾಣುವದು ಸ್ವಲ್ಪ ಕಷ್ಟವಾದೀತು. ಭಕ್ತಿಗೆ ತರ್ಕದ ಒರೆಗಲ್ಲು ಇರದು. ಕೇವಲ ಅಲ್ಲಿರುವದು ತೆರೆದ ಹೃದಯ. ಶುದ್ಧಪ್ರೇಮದ ಶಕ್ತಿಯ ಮುಂದೆ ಯಾವ ಶಕ್ತಿಯೂ ನಿಲ್ಲದು. "ಪ್ರೇಮ ಸಾಮ್ರಾಜ್ಯದಲ್ಲಿ ಬಡತನವೇ ಸಿರಿತನವು." ಷೇಕ್ಸ್‌ಪಿಯರರ ಈ ನುಡಿಯು ಇಲ್ಲಿ ನಮ್ಮ ನೆನಪಿಗೆ ಬರುತ್ತದೆ. "ಅನಂತಕೋಟಿ ತಪ್ಪು-ಗಳನ್ನು ತಿದ್ದಿಕೊಂಡು, ಹೃದಯವನ್ನು ಪವಿತ್ರ ಮಾಡಿಕೊಳ್ಳುವ ಸೋಲದ ದಾರಿ ಪ್ರಾರ್ಥನೆಯೇ. ದೇವರು ಪ್ರಾರ್ಥನೆಗೆ ಮನ್ನಿಸಿದಷ್ಟು ಬೇರೆ ಯಾವುದಕ್ಕೂ ಮನ್ನಿಸಲಾರ." ಅಂತೆಯೇ ಈ ವಚನಕಾರರು ಪ್ರಾರ್ಥನೆಗೆ ಬಹಳ ಮಹತ್ವ ನೀಡಿದ್ದಾರೆ. ಪ್ರತಿಯೊಂದು ವಚನದಲ್ಲಿ ಸಂಗಮೇಶರ ಹೃದಯ ಮಿಡಿತ ಎದ್ದು ಕಾಣುತ್ತದೆ. ಸಂಗಮನಾಥನ ಉಪವನದಲ್ಲಿ 'ಗುಂಯ್‌ಗುಡು'ವ ದುಂಬಿಯಾಗಿ ಹಾರ ಬೇಕೆಂದು ಹಾತೊರೆಯುತ್ತಿದ್ದಾರೆ.

"ಕೆಚ್ಚಿರಲಿ ಹುಚ್ಚಿರಲಿ, ನಿನ್ನಿಚ್ಛೆ ನನಗಿರಲಿ, ನೀ ಮೆಚ್ಚಿ ಬಾರಾ" ಎಂದು ತಮ್ಮ ಭವಿಷ್ಯ ಜೀವನದಲ್ಲಿ ಆಧ್ಯಾತ್ಮಿಕ ಸಿಹಿ ಜೇನನುಂಡು ಆ ಸವಿಸುಖದ ಹೊಂಗನಸು ಪಡೆಯುವ ಹಂಬಲವುಳ್ಳ ವಚನಕಾರರು ನಿಜವಾಗಿಯೂ ಧನ್ಯರು ! ಧನ್ಯರು !!

ಮತ್ತೊಂದೆಡೆಗೆ—

"ಕಿಡಿಗೆ ಕಿಡಿ ಕೆದರಿಸುತ ಎದೆಗುಡಿಯ ಬೆಳಗಿಸಿದೆ,
ಮತಿಗೆ ಮತಿ ಮಥಿಸುತ್ತ ಮೈಮರೆಸಿ ಬಿಟ್ಟೆ,
ಭಾವಲತೆ ಸಿರಿಗುಡಿಗೆ ಬಾಂದಳವ ತೋರಿಸಿದೆ,
ಆವ ಜನುಮದ ಪುಣ್ಯವೋ ಕಾಣೆನಯ್ಯ,
ಹಿಡಿದೆಳೆದು, ಬಿಗಿದಪ್ಪಿ, ಕಣ್ಣಿಟ್ಟು ರಕ್ಷಿಸುವೆ,
ಕೈ ನೀಡಿ ಸಾಗಿಸುವೆ,
ಈ ಪರಿಯು ಈ ಸಿರಿಯು—
ಹೇಳಲಾಗದು ಅಯ್ಯ! ಶ್ರೀ ಸಂಗಮನಾಥ
ಎಂದು ಹೇಳುತ್ತ—

"ಮುಂಡೆ ಬೋಳಿಸಿದರೇನು ? ಮನಬೋಳಾಗದೆ
ಕಾವಿ ಧರಿಸಿದರೇನು ? ದೇವಗುಣ ಬಾರದೆ
ಮುಪ್ಪು ಮೈಮರೆಸಿದರೇನು ? ಒಪ್ಪುಗೂಡದೆ
ಸ್ವಾತಂತ್ರ್ಯ, ಸ್ವಾತಂತ್ರ್ಯ ಅಂದರೇನು ? ಸ್ವಾರ್ಥಬಿಡದೆ
ನಿಮ್ಮ ಪೂಜಿಸಿದರೇನು ? ನಾನೆಂಬುದನಳಿಯದೆ
ನಿಮ್ಮಂಗಳದ ಗಂಗೆಯೊಳು ಮುಳುಮುಳುಗಿದರೇನಯ್ಯ–
ಮನ, ಭಾವ, ಅಹಂಕಾರಗಳು ಮುಳುಗಿ ಮಡಿಯಾದವೆ ?
ಒಳಹೊರಗು ಶುಚಿಗೊಳಿಸಿ,
ನಿಮ್ಮ ರುಚಿ ತಿಳಿಸಿ–
ಮುನ್ನಡೆಸು ಶ್ರೀ ಸಂಗಮನಾಥ"

ಆಶೆ ಆಮಿಷಗಳಲ್ಲಿ ತೊಳಲಾಡುತ್ತ, ಬಹಿರ್ಮುಖ ಜೀವನದಲ್ಲಿ ಅಲೆದಾಡುತ್ತ ತಿರುಗುತ್ತಿರುವ ವೇಷಧಾರಿಗಳನ್ನು ಕಂಡು ಮರುಗಿ ನುಡಿದ ಈ ವಚನಗಳು, ಹೃದಯ ಮುಟ್ಟುವಂತಿವೆ. ನಿಜದ ನಿಲುಮೆಯನರಿಯದ ಭಾವಶೂನ್ಯರಾದ ಬುದ್ಧಿಜೀವಿಗಳ ಕಿವಿಗೆ ತಿಳಿನುಡಿಗಳನ್ನು ತಿಳಿಸಿದಂತಿದೆ. ವೃದ್ಧಾಪ್ಯದಲ್ಲಿಯೂ ಸ್ವಾರ್ಥಬಿಡದೆ ಮೋಸ, ವಂಚನೆ ಮಾಡುವ ಹಿರಿಯರಿಗೆ ಬುದ್ಧಿವಾದ ಮಾಡಿದಂತಿದೆ. ಶುಚಿರ್ಭೂತರಾಗದ, ವಿಚಾರವಿಲ್ಲದ ಆಚಾರವಂತರನ್ನು ಬಡಿದೆಬ್ಬಿಸಿ, ಮನ, ಭಾವ, ಅಹಂಕಾರಗಳನ್ನು ತೊಳೆಗಿಸಿ ಮಡಿ ಮಾಡುವಂತಿವೆ ಈ ವಚನಗಳು. ನೋವಾಗುವಂತೆ ಕಾಣುವ ಈ ವಚನಗಳಲ್ಲಿ, ಸೂಕ್ಷ್ಮವಾಗಿ ಪರಿಶೀಲಿಸಿದರೆ, ಅರ್ಥಗರ್ಭಿತವಾಗಿದೆ, ಸಾಮಾಜಿಕ ಕಳಕಳಿ ಹಾಸುಹೊಕ್ಕಾಗಿದೆ, ಜನಮನವನ್ನು ತಿದ್ದುವ ಕೊರಗು ಎದ್ದು ಕಾಣುತ್ತಿದೆ. "ದೇವರ ಬಗೆಗೆ ಆಡಿ, ಹಾಡಿದ ಮಾತ್ರಕ್ಕೆ ದೇವತ್ವವ ಪಡೆಯಬಹುದೇನಯ್ಯ" ಎಂದೆನ್ನುತ್ತಾನೆ. ಕವಿಯು ಒಮ್ಮೆ ಮೃದು ಹೃದಯದವನಾದರೆ, ಮತ್ತೊಮ್ಮೆ ಕಠೋರನಾಗುತ್ತಾನೆ. ಸಾಮಾಜಿಕ ರೀತಿ ನೀತಿಗಳನ್ನು ನೋಡಿ ದುಃಖಿತನಾಗಿ "ನೋಡುವ ಕಣ್ಣಿಗೆ ಬೆಳಕಿರದಿದ್ದರೇನು ಫಲ ? ಆಡುವ ನಾಲಿಗೆಗೆ ಮಡಿವಂತಿಕೆಯಿರದಿದ್ದರೇನು ಫಲ? ಮಾಡುವ ಕೈಗೆ ನೀಡುವ ಶಕ್ತಿ ಇರದಿದ್ದರೇನು ಫಲ? ಆಡಿನ ಕೊರಳ-

ಲ್ಲಿಯ ಮೊಲೆಯಂತಾಯಿತ್ತೆ"ಂದು ತನ್ನನ್ನೇ ತಾನು ಹಳಿದುಕೊಳ್ಳುತ್ತಾನೆ. ನೋಡುವಲ್ಲಿ, ಆಡುವಲ್ಲಿ, ಮಾಡುವಲ್ಲಿ ಬುದ್ಧಿ ನೀಡಿ, ಹೃದಯದೊಳು ಸೇರೆಂದು ಸಂಗಮನಾಥನಲ್ಲಿ ಮೊರೆಯಿಡುತ್ತಾನೆ. ಸರ್ವಾರ್ಪಣಭಾವವು ಇಲ್ಲಿ ಹೊರಸೂಸಿ ಬಂದಿದೆ. ಇಂತೀ ಹೃದಯದ ಕೊರಗನ್ನೇ ದೇವರು ನಿರೀಕ್ಷಿ-ಸುತ್ತಾನಲ್ಲವೆ ? ಇಂತಹ ಭಕ್ತಿ ದೇವರಿಗೆ ಅಚ್ಚುಮೆಚ್ಚಿನದು. ಮೆಚ್ಚುತ್ತಾನೆ!

ಈ ವಚನಕಾರರು ಅಪ್ರಾಮಾಣಿಕರನ್ನು ಕಂಡು ದುಃಖಿತರಾಗಿದ್ದಾರೆ. ನರಜನ್ಮ ಪಡೆದು ಎಳ್ಳಿನಿತೂ ಮನುಷ್ಯತ್ವ ಪಡೆಯದೆ ಸುಳ್ಳು ಮೋಸದಲ್ಲಿ ನಡೆಯುವವರನ್ನು ಕಂಡರೆ ಇವರಿಗೆ ಆಗದು. ಕಂಡ ವಿಷಯವನ್ನು ಕಂಡಂತೆ ಎದುರಿಗಿಟ್ಟಿದ್ದಾರೆ. ದುರ್ವ್ಯಸನ, ದುರಾಚಾರಕ್ಕೆ ಹಣವು ನೀರಿನಂತೆ ವ್ಯಯವಾಗುತ್ತಿರುವುದನ್ನು ನೋಡಿ ಮಮ್ಮಲನೆ ಮರುಗಿದ್ದಾರೆ. "ನೋಟಕ್ಕಿಂತ ಮಾಟಕ್ಕೆ ವೆಚ್ಚ ಹೆಚ್ಚು ಮಾಡಿಕೊಂಡು ಆತ್ಮಾನಂದಕ್ಕೆ ವೆಚ್ಚವಾಗುವ ಹಣದ ಲೆಕ್ಕದ ಬಗ್ಗೆ ಕನಿಕರಪಟ್ಟು ಈ ಲೆಕ್ಕವನ್ನು "ಲೆಕ್ಕಾಚಾರ'ಕ್ಕಿಳಿಸಲು ಬರಬೇಕೆ"ಂದು ಸಂಗಮನಾಥನಿಗೆ ಆಹ್ವಾನವಿತ್ತಿದ್ದಾರೆ. ಇದೇ ಮಾನವನನ್ನು ತಿದ್ದುವ ಪರಿ. ದೇವರನ್ನು ಕುರಿತು ಇಂತಹ ಅತ್ಯಾಚಾರ, ಅನಾಚಾರಗಳನ್ನು ತಪ್ಪಿಸಲು ಕೇಳಿಕೊಂಡದ್ದು, ಸಮಾಜದಲ್ಲಿಯ ಕೊಳೆಯನ್ನು ಕಳೆಯುವ ಕಳಕಳಿಯು ಇವರ ಅಂತರಂಗದಲ್ಲಿ ತುಂಬಿಕೊಂಡದ್ದು ನೋಡಿದರೆ, ನಮಗೂ ಅತೀವ ಆನಂದವಾಗುತ್ತದೆ.

ಇವರು ಸಮಾಜಕ್ಕೆ ಸಲ್ಲಿಸುವ ಮನವಿಯನ್ನು ಇನಿತಕ್ಕೆ ನಿಲ್ಲಿಸದೆ, ವ್ಯರ್ಥವಾಗಿ ಉತ್ಸವದಲ್ಲಿ ಉತ್ಸಾಹ ವ್ಯಯವಾಗಿ, ಸಭೆ, ಸಮಾರಂಭ, ಸಿನೇಮಾ, ನಾಟಕಗಳಿಗೆ ವೇಳೆ ಹಾಳುಮಾಡುತ್ತಿರುವವರನ್ನು ಖಂಡಿಸಿ-ದ್ದಾರೆ. ಸಮಯದ ಸದುಪಯೋಗದ ಕಡೆಗೆ ಗಮನವೆಳೆದಿದ್ದಾರೆ. ಸಮಾಜದಲ್ಲಿ ಅನೇಕ ಪಕ್ಷ-ಪಂಗಡಗಳನ್ನು ಹುಟ್ಟಿಸಿ ದ್ವೇಷ, ಮತ್ಸರ ಮುಂಗೋಪಗಳಿಗೆ ಬಲಿಯಾಗುವ ವ್ಯಕ್ತಿಗಳನ್ನು ಧಿಕ್ಕರಿಸಿದ್ದಾರೆ. ಗುರಿ-ಯಿರದ ದಾರಿಯಲ್ಲಿ ಜಗವು ನಡೆದು ಆಯುಷ್ಯ, ಆರೋಗ್ಯವನ್ನು ನಾಶ ಮಾಡಿಕೊಳ್ಳುತ್ತಿರುವವರನ್ನು ಬೈಲಿಗೆಳೆದಿದ್ದಾರೆ. ಇಂತಹ ದುಷ್ಟ ಪ್ರವೃತ್ತಿ-ಯಲ್ಲಿರುವವರನ್ನು "ಮನತುಂಬಿಸಿ. ತನುತುಂಬಿಸಿ. ಕೈಹಿಡಿದು ಸಾಗಿಸೆ"ಂದು

ಸಂಗಮನಾಥನನ್ನೇ ಮೊರೆಹೊಕ್ಕಿದ್ದಾರೆ. "ಮನಕಟ್ಟದೆ ಮನೆಕಟ್ಟಿದರೇನು ಪ್ರಯೋಜನವೆಂದು ಪ್ರಶ್ನಿಸುತ್ತಾರೆ. "ಬೆಳಗಿನೊಳು ಕಂಡ ಬಾವಿಯ ಕತ್ತಲೊಳು ಬಿದ್ದಂತಾಯಿ"ತೆಂದು ತಿಳಿಸುತ್ತಾರೆ. ನಾವಿಲ್ಲಿ ವಚನಕಾ ರಲ್ಲಿರುವ ಅಂತಃಸ್ಸತ್ವ, ಧೈರ್ಯ, ಸಾಹಸ, ಸಾಮಾಜಿಕ ಕಳಕಳಿಯನ್ನ ಕಾಣಬಹುದು.

ಒಬ್ಬೊಬ್ಬರಿಗೆ ಒಂದೊಂದು ಚಿಂತೆಯಾದರೆ ಕವಿಯ ಚಿಂತೆ ಬೇರೆ. ಅದನ್ನು ಇಲ್ಲಿ ಕಾಣಬಹುದು:

"ಕಾವ್ಯಕ್ಕೆ ಪ್ರತಿಭೆಯ ಚಿಂತೆ,
ಪ್ರತಿಭೆಗೆ ಪರಿಶ್ರಮದ ಚಿಂತೆ,
ಪರಿಶ್ರಮಕೆ ಸಂಸಾರದ ಚಿಂತೆ,
ಸಂಸ್ಕಾರಕೆ ಭಾಷೆಯ ಚಿಂತೆ,
ಭಾಷೆಗೆ ಶೈಲಿಯ ಚಿಂತೆ,
ಭಾವಕೆ ಅನುಭಾವದ ಚಿಂತೆಯಯ್ಯಾ
ಅನುಭಾವಕ್ಕೆ ಸದಾ ನಿಮ್ಮ ಸ್ಮರಣೆಯ ಚಿಂತನೆಯನಿತ್ತು
ಸಲಹು ಶ್ರೀ ಸಂಗಮನಾಥ"

ಎನಿತು ಸ್ವಾರಸ್ಯವಿದೆ ನೋಡಿ ಈ ವಚನದಲ್ಲಿ! ಮಾಧುರ್ಯ ತುಂ ತುಳುಕಿದೆ, ಭಾವಗಂಗೆ ಹರಿದಿದೆ. ಎದೆಯುಕ್ಕಿ ಹಾಡಿದಂತಿದೆ. ಸಂಸಾ ದಲ್ಲಿದ್ದು ಉತ್ತಮ ಸಂಸ್ಕಾರದಲ್ಲಿ ಜೀವನ ಸಾಗಿಸಿ ಬುದ್ಧಿ, ಭಾವ ಸಂಗಮದಲ್ಲಿ ಮಿಂದು ಪುನೀತರಾಗುವ ಮಹದಿಚ್ಛೆ ಒಡೆದು ಕಾಣುತ್ತಿ ವಿಶಾಲ ಮನೋಭಾವನೆ, ಭಾವಕ್ಕೆ ತಕ್ಕ ಅನುಭಾವದ ಚಿಂತೆಯ ಮುಳುಗೇಳುವ ಕಾತರದಲ್ಲಿದ್ದಾರೆ. ಇಂತಹ ಅಭೀಪ್ಸೆಯು ಮನತುಂ ದಾಗ ವ್ಯಾವಹಾರಿಕ ಚಿಂತೆಯ ಚಿತೆಯು ಜೊತೆಯಲ್ಲಿದ್ದು, ಸುಡಬಾ ದೆಂಬುದನ್ನರಿತು ನಿತ್ಯನೂತನವಾಗಿರುವ ಪ್ರತಿಭೆ, ಸದಾ ದೇವಸ್ಮರಣೆ ಚಿಂತೆಯಲ್ಲಿ ಕಾಲಕಳೆಯಲು ಪರಿಶ್ರಮಿಸುತ್ತಿದ್ದಾರೆ. ನೂರಾರು ಚಿಂತೆಗ ಈ ಚಿಂತನ ದಿವ್ಯೌಷಧವಿದ್ದಂತೆ. ಮನುಷ್ಯನನ್ನು ಮೇಲಕ್ಕೆತ್ತುವದೇ

ಚಿಂತೆ. ಸಾಸಿವೆಯಷ್ಟು ಸುಖವಿರುವ ಸಾಗರದಷ್ಟು ದುಃಖವಿರುವ ಈ ಸಂಸಾರದ ಚಿಂತೆ ಅಧೋಗತಿಗೆ ಒಯ್ಯುವದೆಂಬುದನ್ನು ಶಿವಕವಿಗಳಾದ ಹೊಸಮನಿಯವರು ತಿಳಿದು ಶಿವ-ಚೇತನೆಗೆ ಮಾರುಹೋಗಿದ್ದಾರೆ. "ನೂರೆಂಟು ವಿಕಾರಗಳ ಬೆಂಕಿ ಎದೆಗುದಿಯಲ್ಲಿ" ಹೃದಯಾಂದರವಿಂದವನು ಅರಳಿಸುತ್ತಲಿರುವ ಇವರ ಮತ್ತೊಂದು ಸುಂದರ ವಚನವನ್ನು ಓದುಗರೇ ನೋಡಿ ಆನಂದಪಡಬೇಕು:

"ಈಜಿದೆವು ಮೀನವಾಗಿ,
ಹಾರುವೆವು ಪಕ್ಕಿಯಾಗಿ,
ಬಾಂದಳವ ಅಡಿಯಿಟ್ಟು ಅಳೆದುಬಿಡುತಿಹೆವು,
ಕಡಲಿನಡಿಯನು ಮುಟ್ಟಿ ಆಡುತಿಹೆವು.
ನೆರೆಮನೆಯ ಬಾಂಧವರ ಒಡನಾಟವಿಲ್ಲ,
ಈರ್ಷೆ, ದ್ವೇಷದ ವಿಷವ ಕುಡಿದು ಕುಡಿದು,
ವೈರ ಮತ್ಸರದಲ್ಲಿ ಮೈಮರೆಯುತಿಹೆವು,
ಹಿಂಸೆ, ತಾಂಡವ ನೃತ್ಯ ನಡೆಸಿರುವೆವಲ್ಲ!
ವಿಜ್ಞಾನಯುಗದಲ್ಲಿ ಕತ್ತಲೆಯ ರಾತ್ರಿಯೆ ?
ಎತ್ತಹೋದರು ಇಲ್ಲ ಶಾಂತಿ, ಸಮತೆ,
ಜೀವ-ಜೀವಕೆ, ಇಳಿಯದೇನಯ್ಯ ಮಮತೆ?
ಸುಜ್ಞಾನದಡಿಯಲ್ಲಿ ವಿಜ್ಞಾನಮಾಗಿ,
ಶಾಂತಿ, ಸಮತೆಗೆ ದಾರಿದೀಪ ನೀನಾಗಿ,
ಜಗಕೆ ನಂದಾದೀಪ ಬೆಳಗಿಸಯ್ಯ ಶ್ರೀ ಸಂಗಮನಾಥ".

ಈ ರೀತಿಯಾಗಿ ವಿಶ್ವಶಾಂತಿಯತ್ತ ಮನಹೊರಳಿಸಿದ್ದಾರೆ. ಜಗತ್ತಿನಲ್ಲಿ ವಿಜ್ಞಾನದ ಪ್ರಭಾವದಿಂದ ದ್ವೇಷಾಸೂಯೆಗಳು ಭುಗಿಲ್ಲೆಂದು ಏಳುತ್ತೇಳುತ್ತ ವಿನಾಶದತ್ತ ಸಾಗಿರುವ ಜಗತ್ತನ್ನು ನಂದಾದೀಪದಂತೆ ಬೆಳಗಿಸಯ್ಯ. ವಿಜ್ಞಾನದ ಜೊತೆಗೆ ಸುಜ್ಞಾನದ ದೀಪ್ತಿ ನೀಡಯ್ಯ. ಶಾಂತಿ, ಸಮತೆ, ಮಮತೆ ಜಗತುಂಬ ಇಳಿದು ಬರಲೆಂದು ಬೇಡಿಕೊಂಡಿದ್ದಾರೆ. ಹಿಂಸೆಯ ತಾಂಡವನೃತ್ಯದಿಂದಾಗುವ ಹಾನಿಯನ್ನು ತಡೆದು ಕೃಪೆದೋರೆಂದು ಕಳ-

ಕಳಿಯಿಂದ ಪರಮಾತ್ಮನಿಗೆ ಮೊರೆಹೋಗಿದ್ದಾರೆ. ಇಂದಿನ ವಾತಾವರಣ ಪರಿಹಾರವಾಗಿ ಈ ವಚನ ರಚಿಸಿದ್ದಾರೆ. ವಿಜ್ಞಾನದ ಪ್ರಗತಿ ಪ್ರಳಯದತ್ತ ಸಾಗದಿರಲು ಭಾವೈಕ್ಯದ ಅಭಾವವೇ ಕಾರಣ. ಬುದ್ಧಿ ಬೆಳ ಭಾವ ಬೆಳಗದಿದ್ದರೆ ವಿಶ್ವಶಾಂತಿ ಕನಸಿನ ಮಾತಾದೀತು.

ಒಟ್ಟಿನಲ್ಲಿ ಹೊಸಮನಿಯವರ ವಚನ-ವೈಖರಿ ಹೊಸ ಬಾ ರಸದೂಟ ನೀಡುವಂತಹದು. ಸರಳ ಭಾಷೆಯಲ್ಲಿ ಭಾವದ ವೈಭವವ ತುಂಬಿದವರು, ಕೊರಗುವ ಕರುಳಿನವರು. ತಿಳಿಮನದಿ, ತಿಳಿಬೆಳಗಿನೊ ಕಾಲ ಕಳೆಯುವವರು. ವಿಚಾರ ಮಾಧುರ್ಯ, ಅರ್ಥ ಗೌರವ, ಭಾವ ಸೌ ರ್ಯಗಳಿಂದ ಕೂಡಿದ ವಚನ ರಚನೆ ಎಂತಹ ವ್ಯಕ್ತಿಗಳನ್ನೂ ಆಕರ್ಷಿಸು ವಂತಹದು. ಪ್ರಪ್ರಥಮ ವಚನ ರಚನೆಯಲ್ಲಿಯೇ ಸಾಹಿತ್ಯದ ಸ ತುಂಬಿರುವಾಗ, ಮುಂಬರುವ ವಚನಗಳಲ್ಲಿ ಮಹೋನ್ನತ ವ್ಯಕ್ತಿತ್ವ ಬೆಳಗನ್ನು ಕಾಣುವ ಮುನ್ಸೂಚನೆಯನ್ನು ಈಗಾಗಲೇ ಕಂಡುಕೊ ಬಹುದಾಗಿದೆ.

"ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು,
ಬಯಕೆ ಬರುವದರ ಕಣ್ಣಸನ್ನೆ ಕಾಣೊ "

ಎಂಬ ಆಧ್ಯಾತ್ಮ ಕಾವ್ಯರ್ಷಿಯ ಉಕ್ತಿಯಂತೆ ಭಾಷೆಯ ಬೆಡಗಿನಿ ಹಾಗೂ ಕಾವ್ಯ ಪ್ರತಿಭೆಯಿಂದ, ಭಾವ ಸಂಪತ್ತಿಯಿಂದ, ಆಧ್ಯಾತ್ಮ ದೈಸಿರಿಯ ಇವರ ವಚನ ಸಾಹಿತ್ಯವು ಭಾವಗದ್ದುಗೆಯ ಜಗುಲಿಯ ಮೇ ಅನವರತವೂ ಬೆಳಗಲೆಂದು ಅಂತಃಕರುಣಪೂರ್ವಕವಾಗಿ ಹಾರೈಸೋಣ ವಾಗಿದೆ.

ಬಿಡುವಿಲ್ಲದ ನಮ್ಮ ಜೀವನದಲ್ಲಿ ಎರಡು ಮೂರು ಪುಟದಷ್ಟ ಆಶೀರ್ವಚನವನ್ನು ಬರೆದುಕೊಡಬೇಕೆಂದು ನಿರ್ಧರಿಸಿ ಬರೆಯಲು ಪ್ರಾರಂಭಿಸಿ ನಾವು ಇಷ್ಟು ಪುಟದಷ್ಟು ತಂತಾನೆ ಆದದ್ದು ನೋಡಿದಾಗ ನಮಗೆ ಪ ಮಾಶ್ಚರ್ಯವಾಯಿತು. ಅದಕ್ಕೆ ಸಂಗಮನಾಥನ ವಚನಗಳೇ ಕಾರಣ ಓದುತ್ತ ಹೋದಂತೆ ಆನಂದವುಕ್ಕಿ ಬರೆದುದಾಗಿದೆ, ಸುದೀರ್ಘವಾ

ಆಶೀರ್ವಚನ ಬರೆಯಬೇಕೆಂಬುವ ಹೊಸಮನಿಯವರ ಮನೀಷೆ ಪೂರೈ-ಸಿದ್ದಕ್ಕೆ ನಮಗೂ ಸಂತಸವನ್ನುಂಟು ಮಾಡಿದೆ.

ವಚನ ಕವಿಗೆ ನಮ್ಮ ಆಶೀರ್ವಾದವಿಂತಿದೆ:

ನೀ ಬರೆದ ನೂರೊಂದು ವಚನಗಳು,
ನುಡಿ ಮುತ್ತುಗಳಂತಿಹವಯ್ಯ !
ಬಡಶಿಕ್ಷಕನಾದರೇನಂತೆ,
ಭಕ್ತಿಗೆ ಬಡತನ, ಸಿರಿತನವುಂಟೆ ?
ಪರಿಮಳ ಬೀರುವ ಪುಷ್ಪವೆಲ್ಲಿದ್ದರೇನಂತೆ,
ಸೌಗಂಧ ಬೀರುವದು ಬಿಡುವದೆ ?
ಭಾವ ಪುಷ್ಪವರಳಿಸಿ ವಚನ ರಚಿಸಿದ ನಿನಗೆ,
ಕಾರುಣ್ಯ ಕಿರಣವ ಕರುಣಿಸದೆ ಬಿಡುವನೆ !
ಭ್ರೂಲತಾಪುರೀಶವಾಸ ಕರ್ತೃಜಗದ್ಗುರು ಗುರುಸಿದ್ಧೇಶ್ವರ!!

ಹುಬ್ಬಳ್ಳಿ                                        इत्याशिष:
ದಿನಾಂಕ ೯-೧-೧೯೭೨

# ಅಭಿಪ್ರಾಯ

ಶ್ರೀ ಸಂಗಮೇಶ ಹೊಸಮನಿಯವರ- ವಚನ ಸಂಗ್ರಹವು ಅವರ ಇಪ್ಪತ್ತೈದು ವರ್ಷಗಳ ಪರಿಶ್ರಮದ ಪ್ರತಿಫಲವಿದು- ಈ ಹೊಚ್ಚ ಹೊಸ ಕೃತಿ !

ಕವಿಗಳು ಈಗಾಗಲೇ ನಾಡಿಗೆ ಚಿರಪರಿಚಿತರಾಗಿ ಆಧ್ಯಾತ್ಮಕವಿ, 'ಶಿವಕವಿ'ಗಳಾಗಿದ್ದಾರೆ. ಇವರ ಸಾಹಿತ್ಯ ಲೇಖನ, ಕವನಗಳ ರೂಪದಲ್ಲಿ ಹುಲುಸಾಗಿ ಹೊರಬಂದಿದೆ !

ವಚನಗಳು ಅರಿತು, ಅನುಭವಿಸಿ ಬರೆದವುಗಳು. ಭಾವ, ಭಾಷೆ, ಧ್ವನಿಗಳು ಪ್ರತಿಭೆಯೊಂದಿಗೆ ಮೈಗೂಡಿ ಬಂದಿವೆ ! ಜೀವನದ ಅನುಭವವು ವಚನಗಳಲ್ಲಿ ಚೇತನಾಶಕ್ತಿಯಾಗಿ ಹಾಸುಹೊಕ್ಕಾಗಿ ಮೈಗೂಡಿ ಬಂದಿದೆ! ಇದು ಅವರ ಅಚಲವಾದ ನಿಷ್ಠೆ ಭಕ್ತಿಗಳ ಪ್ರತೀಕವಾಗಿದೆ. ಶ್ರೀ ಶ್ರೀ ಹಾನಗಲ್ಲ ಕುಮಾರೇಶನ ಕೃಪಾಫಲವಾಗಿದೆ !

ಕವಿಗಳು ನೂರೊಂದು ವಚನಗಳನ್ನು ನಾಡ ನುಡಿಯಲ್ಲಿ ಇರಿಸಿ-ದ್ದಾರೆ. ವಚನಗಳು ಈಗಾಗಲೇ ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಬೆಳಕು ಕಂಡಿವೆಯಲ್ಲದೆ ವಿದ್ವಜ್ಜನರ ಆದರಕ್ಕೆ ಪಾತ್ರವಾಗಿವೆ ! ಈ ಕವಿಗಳ ಈ ವಚನ ಸಂಗ್ರಹಕ್ಕೆ ಹೃದಯಾರೆ ಹರಕೆ ನೀಡೋಣವಾಗಿದೆ !

ಶ್ರೀ ಸಂಗಮೇಶ್ವರನ ಸಾಹಿತ್ಯ ಸೇವೆ ಹುಲುಸಾಗಿ ಬೆಳೆದು ನಾಡಿನ ಸಾರಸ್ವತ ಲೋಕಕ್ಕೆ ಈಗಿನಂತೆ ಅಮೋಘ ಸೇವೆಸಲ್ಲಿಸಲು ಶ್ರೀ ಶ್ರೀ ಹಾನಗಲ್ಲ ಕುಮಾರೇಶನು ಆಶೀರ್ವದಿಸಲೆಂದು ಅಂತಃಕರುಣಪೂರ್ವಕ ಹಾರೈಸೋಣವಾಗಿದೆ !

ನಾಡಿಗರು ಈ ಅನುಭಾವಮಯ ಕೃತಿ ಓದಿ ಪರಮಾನಂದಪಡು-ವರಾಗಿ ಆಶಿಸಿದ್ದೇನೆ.

ಶ್ರೀ ಸದಾಶಿವ ಮಹಾಸ್ವಾಮಿಗಳು
ಹಾನಗಲ್ಲ

ಶಿವಯೋಗ ಮಂದಿರ
೧೪-೧೧-೧೯೭೦

# ಮುನ್ನುಡಿ

ಪ್ರಪ್ರಥಮವಾಗಿ ಹಿರೇಬಾದವಾಡಗಿಯಲ್ಲಿ ಈ ವಚನಗಳನ್ನು ಶ್ರೀ ವಿಜಯಮಹಾಂತೇಶ್ವರರ ಪುರಾಣದ ಮಂಗಲ ಸಮಯದಲ್ಲಿ ಓದಿ ಓದಿ ಆನಂದಪಟ್ಟೆವು. ಅಂದಿನ ಜನಸ್ತೋಮದೆದುರಿಗೆ ಮತ್ತೆ ಮತ್ತೆ ಓದಿ ಸಂತಸಗೊಂಡೆವು.

ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಪೀಠದಿಂದ "ಶಿವಕವಿ" ಪ್ರಶಸ್ತಿ ಶ್ರೀ ಸಂಗಮೇಶ ಹೊಸಮನಿಯವರಿಗೆ ದೊರೆತುದು ಅತ್ಯಂತ ಔಚಿತ್ಯಪೂರ್ಣವಾಗಿದೆ. ಅವರು ಭಾವಜೀವಿಗಳು. ಅವರ ಹೃದಯಾಂತರಾಳದಿಂದ ಹೊರಹೊಮ್ಮಿದ ಈ ವಚನಗಳು ಅನುಭವಪೂರ್ಣವಾ-ದವುಗಳು. ಅನುಭವಿಸಿ ಬರೆಯುವ ಕಲೆ ಅವರಿಗೆ ಅಂಗವಿಸಿಕೊಂಡಿದೆ. ಅವರು ಬರೆದ ನೂರೊಂದು ವಚನಗಳು ಸಾರಸ್ವತ ಪ್ರಪಂಚಕ್ಕೆ ಅತ್ಯಮೌಲ್ಯ ಕೊಡುಗೆಗಳು. ಜನ ಬದುಕಲು ಬರೆದ ವಚನಗಳಿವು.

ಇವರ ಸಾಹಿತ್ಯ ರಚನೆ ಕೇವಲ ಭಾಷೆ, ಬುದ್ಧಿಗಳ ಗುದ್ದಾಟವಲ್ಲ. ಇವರೊಬ್ಬ ಅನುಭಾವಿ. ಸಾತ್ವಿಕ ವ್ಯಕ್ತಿ. ನಿರಾಡಂಬರ ಜೀವಿ. ಎಂತಹ ಉದ್ರೇಕಕರ ಪ್ರಸಂಗಗಳಲ್ಲೂ ಸಂಯಮ, ಶಾಂತಿಗಳನ್ನು ಉಳಿಸಿಕೊಳ್ಳ ಬಲ್ಲವರು. ಮಾತು ಮೃದು, ನಡತೆ ವಿನಯಪೂರ್ಣ. ಆದರೆ ಸತ್ಯವನ್ನು ಪ್ರತಿಪಾದಿಸದೇ ಬಿಡತಕ್ಕವರಲ್ಲ. ಇವರ ಜೀವನವನ್ನು ಕಂಡವರಿಗೆ ಈ ಮಾತು-ಗಳು ಅತಿಶಯೋಕ್ತಿಯಾಗದೆ ಸಹಜವೇ ಎನಿಸುವವು. ಇವರ ಇಂಥ ಪಕ್ವ ಜೀವನದ ಫಲವಾಗಿಯೇ ರೂಪಗೊಂಡಿವೆ ಈ ವಚನಗಳು.

'ನಾಡಿನ ಪುಣ್ಯ ಹಣ್ಣಾಗಿ ಕವಿ ಉದಯಿಸುತ್ತಾನೆ.' ಎಂಬ ಮಾತೊಂದಿದೆ. ಇದು 'ಶಿವಕವಿ' ಸಂಗಮೇಶ ಹೊಸಮನಿಯವರಿಗೆ ಅನ್ವಯಿಸದೆ ಇರಲಾರದು. ಕಳೆದ ಕಾಲು ಶತಮಾನದಿಂದ ಕನ್ನಡ ಸಾಹಿ-ತ್ಯದ ಸೇವೆ ಮಾಡುತ್ತ ಬಂದಿರುವ ಇವರು, ಈಗಾಗಲೇ 'ಮೊಗ್ಗು ಮಾಲೆ' 'ಪುಷ್ಪಗುಚ್ಛ,' 'ಹೂವು ಹಣ್ಣು' ಎಂಬ ಭಾವಗೀತೆಗಳ ಸಂಗ್ರಹಗಳನ್ನು, 'ಬೋಲಬಗರಿ' 'ಸಕ್ಕರೆ ಗುಬ್ಬಿ' 'ಗಾಂಧೀಗೀತಗಳು' ಎಂಬ ಮಕ್ಕಳ ಹಾಡುಗಳ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. 'ಶಾಂತಿ ಸಾಹಿತ್ಯ ಮಾಲೆ'ಯ

ಪ್ರಕಾಶನದಲ್ಲಿ 'ಶಾಂತಿದೂತ ಶಾಸ್ತ್ರೀಜಿ,' 'ಕೂಡಲ ಸಂಗಮ'-ಗ್ರಂಥಗಳ ಸಂಕಲನ, ಸಂಪಾದನ ಕಾರ್ಯ ನೆರವೇರಿಸಿದ್ದಾರೆ. ಅನೇಕ ಸಾಂಸ್ಕೃತಿಕ ಚಟುವಟಿಕೆಗಳನ್ನು ಸಂಘಟಿಸಿದ್ದಾರೆ. ಸಮಾಜ ಸೇವೆಯಲ್ಲಿ ನಿರಾಳವಾಗಿ ಕಾರ್ಯ ಮಾಡುತ್ತಲಿದ್ದಾರೆ.

ಆಧ್ಯಾತ್ಮ ದೀಪ್ತಿ

'ನಾ ಮಾಡುವೆ, ನಾ ಮಾಡುವೆ ಎಂದರೇನಯ್ಯ !
ನೀನು ಮಾಡಿಸುವಾಗ ?'

—ಎಂಬ ಸರ್ವಶಕ್ತನಾದ ಪರಮಾತ್ಮನ ಅಸ್ತಿತ್ವವನ್ನು ನಿರಾತಂಕವಾಗಿ ಒಪ್ಪಿಕೊಂಡ ಕವಿ. 'ಹುಲ್ಲಿಗೆ ಕೀಳೆನಲಾರೆ ಹಸುಗಳ ಹಸಿವ ಅಡಗಿಸುವಚೀತ' ಎಂದು ಬಗೆದು ಚರಾಚರ ವಸ್ತುಗಳೆಲ್ಲ ಉಪಯುಕ್ತವೆಂಬ ದಿವ್ಯ ವಿಶಾಲ ದೃಷ್ಟಿ ತಳೆದಿದ್ದಾರೆ. 'ಪರದೇಶಿ ನನಗಾಗಿ ನೀನೇನನಿತ್ತೆ ಎನ್ನೊಡೆಯ' ಎಂದು ತನ್ನ ಅಲ್ಪತನಕ್ಕಾಗಿ ಕೊರಗುತ್ತ 'ಈ ಕರ್ಮಿಯನು, ಧರ್ಮಿಷ್ಠರ ಉದರದಲಿ ಹುಟ್ಟಿಸಿದೆ,' 'ಬಳಗ ನೋಡದ ಕಾಗೆ' ಎಂದು ಮೊದಲಾದ ವಚನಗಳಲ್ಲಿ ತನ್ನ ವಿನೀತಭಾವ, ಶುದ್ಧಿಯ ಹಂಬಲಗಳನ್ನು ಸ್ಪಷ್ಟವಾಗಿ ತೋರ್ಪಡಿಸಿದ್ದಾರೆ. ಕವಿ ಕೇಳುತ್ತಿರುವುದು 'ಮಾಗಿರುವ ಹಣ್ಣು'ಗಳನ್ನಾದರೂ 'ತೂಗಿ ಕೈಗಿರಿಸಯ್ಯ' ಎಂದು ಹೇಳುವಲ್ಲಿ ಆಂತರಿಕ ದೃಷ್ಟಿಯ ಸೂಚನೆ ಇತ್ತಿದ್ದಾರೆ.

ದೇವರಲ್ಲೇ ದೃಷ್ಟಿ, ಅವನ ಪ್ರಾಪ್ತಿಗಾಗಿಯೇ ಪ್ರಯತ್ನವಿದ್ದರೂ ಕವಿಯು ಬಾಳಿಗೆ ಕುರುಡಾಗಿಲ್ಲ. ಅಲ್ಲದೆ ಬಾಳೇ ಅದಕ್ಕೆ ಸಾಧನವೆಂದೂ ಬಗೆದಿರುವನು. ಆದರೆ ಬಾಳು ಹಸನಾಗಿ ದೈವಸಾನ್ನಿಧ್ಯಕ್ಕೆ ಸಾರಲು ಸ್ಥಿತ್ಯಂತರ ಪರಿವರ್ತನೆ ಆಗಬೇಕು ತಾನೆ ? ಅದನ್ನೇ—

'ಹಾಲು ಸ್ಥಿತಿಗೆಟ್ಟು ತುಪ್ಪವಾಯಿತಯ್ಯ
ನೀರು ಸ್ಥಿತಿಗೆಟ್ಟು ಪಾದೋದಕವಾಯಿತಯ್ಯ
ಬೂದಿ ಸ್ಥಿತಿಗೆಟ್ಟು ಭಸ್ಮವಾಯಿತಯ್ಯ
ಅನ್ನ ಸ್ಥಿತಿಗೆಟ್ಟು ಪ್ರಸಾದವಾಯಿತಯ್ಯ

ಮಾನವರು ಸ್ಥಿತಿಗೆಟ್ಟು ಶರಣರಾದರಯ್ಯ
ನನ್ನ ಈ ಸ್ಥಿತಿಗೆಡಿಸಿ ನಿನ್ನವನಾಗಿರಿಸಿದೆಯಯ್ಯ
ಶ್ರೀ ಸಂಗಮನಾಥ '

—ಎಂದು ಹೇಳಿ ಆಧ್ಯಾತ್ಮ ಸಾಧನೆಯ ಸಾರಸರ್ವಸ್ವವನ್ನೇ ಸೆರೆಹಿಡಿದಿದ್ದಾರೆ.

'ಅಧಿಕಾರ, ಆಸ್ತಿ, ಯೌವನ, ವೈಭವಗಳಿಂದ ಲೌಕಿಕ ಮಹತ್ವ, ತಾತ್ಪೂರ್ತಿಕ ಸುಖ ಉಂಟಾದರೂ, ಅವು ದೇವರಲ್ಲಿ ಸಲ್ಲಲು ಪ್ರಯೋಜನ ಆಗಲಾರವು' ಎಂಬುದನ್ನು ಕವಿ ಬಲ್ಲ. ಅವು ಇದ್ದರೂ ದುರುಪಯೋಗವಾಗದೆ, ಡಂಭಾಚಾರದಿಂದ ಧಾರ್ಮಿಕ ಸೋಗು ಹಾಕದೆ, ಸತ್ಪಾತ್ರಕ್ಕೆ ಸಂದರೆ ದೇವರ ಸಾನ್ನಿಧ್ಯಕ್ಕೆ ಒಯ್ದಾವು. ಅವು ಯಾವವೂ ಇಲ್ಲದವನಿಗೂ ದೇವರ ಪಾದ ದೊರೆಯದೆ ? ದೊರೆಯದೆನ್ನುವದೆಂಥ ಮಾತು ? ಅವು ಇರದಿದ್ದರೂ ಕವಿ ಹೇಳುವಂತೆ 'ಕಗುಳ ಕನಿಕರ ಪುಷ್ಪ ಪೂಜೆಗಿಟ್ಟರೆ' ಸಾಕಲ್ಲವೆ। ಅದನ್ನು ಪೂಜೆಗೀಡುವುದು ಸುಲಭವೆ ? ಅದಕ್ಕೆ ಸಾಧನೆ ಬೇಡವೆ ? ಸಂಯಮ ಬೇಡವೆ ? ಅರಿಷಡ್ವರ್ಗಗಳನ್ನಳಿಯಬೇಡವೆ ? ಅದನ್ನೇ ಕವಿ ಈ ಎಲ್ಲ ವಚನಗಳ ತುಂಬ ಹಾಡಿದ್ದಾನೆ, ಹಂಬಲಿಸಿದ್ದಾನೆ. ಕೊರಗಿದ್ದಾನೆ, ಮರುಗಿದ್ದಾನೆ, ತಾನು ಅಲ್ಪನೆಂದು ಅರಿತು ತನ್ನ ಉದ್ಧಾರಕ್ಕಾಗಿ ಪರಮಾತ್ಮನಲ್ಲಿ ಸರ್ವಾರ್ಪಣಭಾವದಿಂದ ಪ್ರಾರ್ಥಿಸಿದ್ದಾನೆ.

ಲಂಗು ಲಗಾಮಿಲ್ಲದ ಜೀವಿಗಳ ದಂಡು ತಪ್ಪಿಸಲು 'ಅಂಜಿಕೆಯ ಆಸರೆಯು ಬಹುಮುಖ್ಯ.' ಅದೇ ದೈವ, ಧರ್ಮದ ಅಂಜಿಕೆ. ಆದರೆ ಸಂಗಮನಾಥನು ಒಡಮೂಡದ ಲಿಂಗ, ಜನಿವಾರ, ವಿಭೂತಿ, ತಿಲಕ, ಬಾಯೊಳಗಿನ ಮಂತ್ರ, ಕೈಯೊಳಗಿನ ಜಪಮಾಲೆ, ವ್ಯರ್ಥ ಎಂದು ಎಚ್ಚರಿಸಿದ್ದಾನೆ.

ಕವಿ ಹೆಣ್ಣಾಗಿ ಸಂಗಮನಾಥನನ್ನು ಕುರಿತು 'ಈ ಹೆಣ್ಣನೆದೆ ಹೊಕ್ಕು ಹಣ್ಣಿಸಿದ ನೋಡವ್ವ' ಎಂದು ಹೇಳುವಲ್ಲಿ 'ಶರಣಪತಿ, ಲಿಂಗಪತಿ, ಭಾವವನ್ನು ಅನುಭವಿಸಿದ್ದಾನೆ. ಇಷ್ಟೇ ಅಲ್ಲ, ದೇವನು ಕರುಣಿಸಿ ತನ್ನನ್ನು ಪರಿಪಕ್ವಗೊಳಿಸಿ, ಈಗಾಗಲೇ ಸಾಯುಜ್ಯವನ್ನು ದಯಪಾಲಿಸಿಬಿಟ್ಟನೆಂಬ ಭರವ-

ಸೆಯ ಸಾನಂದ ಸಾಮ್ರಾಜ್ಯದಲ್ಲಿ ಲೋಲಾಡಿದ್ದಾನೆ. ಕವಿ ಸಂಗಮ
ಥನನ್ನು 'ಕೆಟ್ಟ ಬೇರು ಕಿತ್ತು ಕಸಿ ಮಾಡುವ ಸೃಷ್ಟಿಕರ್ತ'ನನ್ನಾಗಿ
ದ್ದಾನೆ. ಇಲ್ಲಿ ಮಾನವ ಅಲ್ಪ, ದೋಷಪೂರ್ಣ, ಅವನ
ಮಾಡಿ ಸಮರ್ಪಕಗೊಳಿಸುವವನು ದೇವನೊಬ್ಬನೇ ಎಂಬ ವಿಚಾರ
ವಾಗಿದೆ.

'ಮನಮಂದಿರದಲ್ಲಿ ನಿಮ್ಮ ಮಕರಂದ ಸೂಸಲಯ್ಯ'
'ಅಂಗಕ್ಕೆ ನೀರೆರೆದರೆ ಲಿಂಗ ಮಜ್ಜನವಾಗಲಿ.' ಈ ವಚನಗಳಲ್ಲಿ
ಸಾರ್ರ್ಯರ ಕೃತಿಗಳಲ್ಲಿಯ ಭಾವ ನಿರ್ಭರತೆ, ಭಾವೋನ್ನತಿಗಳು ಪ್ರದರ್ಶಿ
ಲ್ಪಟ್ಟಿದುದನು ಗುರುತಿಸಬಹುದು.

ವಿಶ್ವವ್ಯಾಪಕನಾದ ವಿಶ್ವೇಶ್ವರನ ಅಸ್ತಿತ್ವವನ್ನು ಸೃಷ್ಟಿಯ ಸಕಲ
ಗಳ ರೂಪದಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಕವಿಗಳು ಹಲವಾರು
ಗಳಲ್ಲಿ ಮಾಡಿದ್ದಾರೆ.

ಗೋವಿಂದ, ಗೌತುಮ, ಗೊಮ್ಮಟ, ಕ್ರೈಸ್ತ, ಪೈಗಂಬರ
ಮನವಾರೆ ಹೊಗಳಿ ಗೌರವಿಸುವ ಕವಿಯು ಸರ್ವಧರ್ಮ ಸಮನ್ವಯ
ಪ್ರದರ್ಶಿಸಿದ್ದಾನೆ. ಅವನು ಹೇಳುವಂತೆ ಅವರೆಲ್ಲ ಶಿವನಿಂದ ಬಂದ
ಬೇರೆ ಶಕ್ತಿಗಳು. ಮುಂದೆ ಶಿವನಲ್ಲಿಯೇ ಐಕ್ಯವಾಗತಕ್ಕವುಗಳು. ಯಾಕೆ
ಅವನು 'ಎರಡು ನದಿಗಳು ಕೂಡಿದೊಡಲ ಕೂಡಲ ಸಂಗಯ್ಯ'ನಲ್ಲವೆ!

ಸಾಮಾಜಿಕ ಪ್ರಜ್ಞೆ: ಆಧ್ಯಾತ್ಮದೀಪ್ತಿಗೆ ಹಂಬಲಿಸಿದ ಈ ವ
ಕಾರನು ಸಾಮಾಜಿಕ ಪ್ರಜ್ಞೆಯಲ್ಲಿ ಹಿಂದುಳಿದಿಲ್ಲ. ಈ ಮಾತು ಮೇ
ವಿವೇಚನೆಯಲ್ಲಿಯೂ ಸ್ಪಷ್ಟವಾಗಿರಲು ಸಾಕು. ಶಿಕ್ಷಕ, ಅಗಸಗಿತ್ತಿ
ಅಧಿಕಾರಿ, ಸರಕಾರಿ ನೌಕರದಾರ, ಪೂಜಾರಿ, ಖಾದಿ–ಕಾವಿ ಧರಿಸಿದವ
ಕಳ್ಳಸಂತೆಕೋರ, ಸೆರೆಗುಡುಕ, ಮಾಂಸಾಹಾರಿ ಮೊದಲಾದವರ ಮನ
ಪರಿ ಕಾವ್ಯವಸ್ತುವಾಗಿ ಮೂಡಿದೆ ಇಲ್ಲಿ. 'ನೀನು ಹಿರಿದೆಂಬೆನೆ
ನೆನೆಯುವ ಭಕ್ತರ ಭಕ್ತ ನೀನು, ಅದಕಾಗಿ ನಿಮ್ಮ ಭಕ್ತರು ಹಿರಿಮೆಯನು
ಯುವದೆ ನಿಮ್ಮನರಿಯುವ ಸಾಧನೆ ನೋಡ ಶ್ರೀ ಸಂಗಮನಾಥ
ಎಂದು ಹೇಳುವಾಗ ವಚನಕಾರರು ನಮ್ಮನ್ನು ನಮ್ಮ ಸಾಮಾಜಿಕ ಕರ್ತವ್ಯ

ತಂದು ನಿಲ್ಲಿಸುತ್ತಾರೆ. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ' ಎಂಬ ಬಸವಣ್ಣನವರ ಮಂತ್ರಕ್ಕೆ ಮುಗ್ಧರಾಗುವಂತೆ ಪ್ರೇರಿಸಿದ್ದಾರೆ.

'ಕಂಡವರಲ್ಲಿ ಕಂಡಂತೆ ಕೆಡುಕನರಸಿದರೆ, ಉಂಡಮನೆ ಜಂತೆಯ-ನೆಣಿಸಿದರೆ ಕಂಡದ್ದು ಕೆಂಡವಾಗದೇನಯ್ಯ ?' ಎಂದು ಕವಿ ಹುಲು ಮನುಜನನ್ನು ಅವನ ಕ್ಷುಲ್ಲಕತೆಗಾಗಿ ಎಚ್ಚರಿಸಿದ್ದಾನೆ. ಎಚ್ಚರ ತಪ್ಪಿದರೆ, ದಂಡನೆಗಳೇಸೊ ! ಅದರಂತೆ ಜೀವನದಲ್ಲಿ ಗುರಿ, ಶಿಸ್ತು, ನಿಜದ ನೆಲೆ ಇರದಿದ್ದರೆ, ನಿತ್ಯ ನಿತ್ಯ ಸತ್ತು ಹುಟ್ಟುವದು ತಪ್ಪದು. ನಿಜದ ಹಾದಿ ಹಿಡಿಯದಿದ್ದರೆ, ನಮ್ಮ ಬಾಳು 'ಆಡಿನ ಕೊರಳಲ್ಲಿಯ ಮೊಲೆಯಾಗುವದು ಸತ್ಯ'. ನಮ್ಮ ಬಾಳು ಹೇಗೆ ಬಂಗಾರವಾದೀತು ? ಇಗೋ ನೋಡಿ—

"ಹಾವು ಕೊರಳ ಹಾರವಾಗಿರಲಿ—
ಹಲ್ಲಿನ ನಂಜನಳಿದರೆ !
ಚೇಳು ಬೆರಳಿಗುಂಗುರವಾಗಿರಲಿ—
ಕೊಂಡಿಯ ವಿಷವನಳಿದರೆ !
ಹುಲಿಯು ವಾಹನವಾಗಿರಲಿ—
ಹಸುವಿನ ಹೃದಯ ಪಡೆದರೆ !
ಮಾನವನು ಪಾವನವಾಗಿರಲಿ—
ಅತಿ ಮಾನವತೆಯ ಐಸಿರಿ ಬಂದರೆ !
ಹುಳವೇನು ? ಮೃಗವೇನು ? ಎಲ್ಲವೂ ನೀನಿರುವಾಗ
ಶ್ರೀ ಸಂಗಮನಾಥ ॥

ಕಾಲಕೆಟ್ಟಿತು, ಕುಲಕೆಟ್ಟಿತು ಅನ್ನುವವರು ತಾವೆಷ್ಟು ಕೆಟ್ಟಿದ್ದಾರೆಂಬುದನು ಅರಿಯದೆ ಹೋಗಿದ್ದಾರೆ. ಸಮಾಜದಲ್ಲಿ 'ಊರ ಹೊಲವ ಮೇಯುವ ಗೂಳಿಗಳು' ಯಾರ ಹೊಲವಾದರೇನಂತೆ ಎನ್ನುತ್ತವೆ. ವಿನಯದಿಂದ ಸಹಿಸುತ್ತ ಹೋದರೆ ತೊತ್ತಳದುಳಿಯುತ್ತವೆ. 'ಉರಿಯುವ ಕಿಚ್ಚಿಗೆ ಹಸಿರು ಮಡಿಯ ಹೊದಿಸಿದರೆ ಸುಡದೆ ಬಿಡುವದೇನಯ್ಯ?' ಆದ್ದರಿಂದ ಕವಿ 'ತಂತ್ರಕ್ಕೆ ತಕ್ಕ ತಂತ್ರವೇ ಮದ್ದು' ಎನ್ನುತ್ತಾನೆ. ಕವಿ ಇಲ್ಲಿ ಹೇಡಿಯಂತೆ ತುಳಸಿಕೊಳ್ಳುವದಕ್ಕಿಂತ ಪರಾಕ್ರಮದಿಂದ ಜೀವನವನ್ನೆದುರಿ-

ಸಲು ಸೂಚಿಸಿದ್ದಾನೆ ! ಕವಿ ಕಷ್ಟದ ಕುಂಡದಲ್ಲಿ ಬೇಯದೆ ಇಂಥ ಕಠೋರ ನಿರ್ಣಯಕ್ಕೆ ಬರಲು ಸಾಧ್ಯವೆ ?

'ಮೃದುವಾದ ಶಿಲೆಯೆಂದು
ಮೂರ್ತಿಯ ಮಾಡಿ ಕೆಡಿಸುವುದೇನಯ್ಯ ?
ಬೆಳೆದ ಬಿದಿರೆಂದು
ಬಣ್ಣದ ಬೆದರು ಹಾಕಿ ನಂದಿಯ ಕೋಲು ಮಾಡಿ
ಕೆಡಿಸುವುದೇನಯ್ಯ ? '

ಈ ವಚನವು ಸಾಮಾಜಿಕ ಕ್ರಾಂತಿಯ ಕಹಳೆಯನ್ನೂದುತ್ತಿದೆ. ಇದನ್ನು ಕೇಳಿದವರು-ಬಿರಿಯಬೇಕು. ಇಲ್ಲವೆ ಅರಿಯಬೇಕು. ಇದರಲ್ಲಿ ಕಾವ್ಯ ಸೌಂದರ್ಯವು ಸೂಸುತ್ತಿದೆ. ಇದು ವಚನಗಳಲ್ಲಿ ಹೊನ್ನ ಕಳಸದಂತೆ ವಿರಾಜಿಸುತ್ತಿದೆಯೆನ್ನಬಹುದು.

'ಮೂಗುತಿಯ ಬಿಚ್ಚಿ, ಬಳೆಗಳನು ಕಳೆಚಿ, ಕೈಹಿಡಿದ ಗಂಡನನು ಕಡೆಗಣಿಸಿದ' ನಾರಿಯರ ಸ್ವಾತಂತ್ರ್ಯದ ಘೋಷಣೆಯನ್ನು ಕವಿಯು ಕಿವುಚಿಹಾಕಿ ಕಿವಿಹಿಂಡದೆ ಬಿಟ್ಟಿಲ್ಲ ! ಹರಿಜನರ ಸಮಸ್ಯೆ ಕವಿಯು ಕಣ್ಣಿಂದ ಜಾರಿಲ್ಲ. ಹರಿಜನರಿಗಾಗಿ ಮನವಿಲ್ಲದೆ ಮಾಡಿ ಮಾಡಿ ಕೆಡುವ ರೀತಿ, 'ಹೆಂಡದ ಗಡಿಗೆಯ ಹೊರಗೆ ತೊಳೆದಂತಾಗಿದೆ'. ಹರಿಜನರನ್ನು ಕುರಿತು ಹೇಳುವಾಗ ಹೆಂಡದ ಹೋಲಿಕೆ ಅರ್ಥಪೂರ್ಣವಾಗಿದೆ. ಸವರ್ಣೀಯರು ಅವರನ್ನು ಇಟ್ಟದ್ದು ಹೇಂಡದ ಮಡಿಕೆಯಂತೆಯೇ ಅಲ್ಲವೆ ? ಸಮಾಜದಲ್ಲಿ ಹೆಂಡದ ಮಡಿಕೆಗಳನ್ನು ನಿರ್ಮಿಸುತ್ತಲಿರುವ ನಾವು ಹೆಂಡದ ಮಡಿಕೆಗಳೇ ಆಗುತ್ತಿದ್ದೇವೆಯೆ?

ಕಾವ್ಯ ಸೌಂದರ್ಯ: ತನ್ನ ಜೀವನ ದರ್ಶನ ಹಾಗೂ ಆಧ್ಯಾತ್ಮಿಕ ಹಂಬಲವನ್ನು ಸತ್ವಪೂರ್ಣವಾಗಿ ಬಿಂಬಿಸಲು ಕವಿಯು ಲೌಕಿಕ ಜಗತ್ತಿನಿಂದ ಆಯ್ದ ರೂಪಕ, ಉಪಮೆ, ಪ್ರತಿಮೆಗಳು ಜೀವಂತವೂ ಜ್ವಲಂತವೂ ಆಗಿವೆ. ಅವು ನೂತನವಾಗಿದ್ದು ಹಲವಾರು ಕನ್ನಡ ಸಾಹಿತ್ಯಕ್ಕೆ ಕವಿ

ಕೊಟ್ಟ ವಿಶೇಷ ಕಾಣಿಕೆಗಳಾಗಿವೆ!

ಬಸವಣ್ಣನವರು, ಮಹದೇವಿಯಕ್ಕ, ಸರ್ವಜ್ಞ ಕವಿಗಳಂತೆ ಈ ಕವಿಗಳು ತಾವು ಹೇಳಬೇಕಾಗಿರುವ ತತ್ವ ಅಥವಾ ವಿಚಾರವನ್ನು ಮನ ಮೆಚ್ಚುವಂತೆ ಮಾಡಲು, ಮೊದಲು ಸಮಾನಾರ್ಥ ಬಿಂಬಿಸುವ ಮೂರು ನಾಲ್ಕು ಚಿಕ್ಕ ಉದಾಹರಣೆಗಳನ್ನು ಕೊಡುವದರಿಂದ ಅಗಮ್ಯವೆನಿಸಿದ್ದ ವಿಚಾರವು ಉದಾಹರಣೆಗಳ (ಚಿಕ್ಕ ಪ್ರತಿಮೆಗಳ) ಜೀವಂತಿಕೆಯ ಕೋಲ್ಮಿಂಚಿನಿಂದ 'ಝಗ್' ಎಂದು ಗಮ್ಯವಾಗುತ್ತದೆ. ಉದಾಹರಣೆಗೆ, 'ಹೊಸ ಸೀರೆ ಉಡಲಾಗದು, ಹೊಸ ಜೋಡು ಮೆಡಲಾಗದು, ಈ ವಚನವನ್ನು ನೋಡಬಹುದು. ಕವಿಗಳು ಈ ತಂತ್ರವನ್ನು ಹಿಂದಿನವರಂತೆ ಸಾಮಾನ್ಯವಾಗಿ ಎಲ್ಲ ವಚನಗಳಲ್ಲಿ ಯಶಸ್ವಿಯಾಗಿ ಬೆಳಗಿಸಿದ್ದಾರೆ. ಆದರೆ ಇದು ಅನುಕರಣೆ ಎನಿಸದೆ ಅನುಭವವು ಚಿಮ್ಮಿಸಿದ ಸ್ಫುರಣವಾಗಿದೆ. ಇದೇ ಪ್ರತಿಭಾಪೂರ್ಣ ಕವಿಯ ವೈಶಿಷ್ಟ್ಯ.

'ಕಾವ್ಯಕ್ಕೆ ಪ್ರತಿಭೆಯ ಚಿಂತೆ' ಎಂಬ ವಚನದಲ್ಲಿ ಕವಿಯ ಕಲ್ಪನೆಗೆ, ಯೋಚನೆಗೆ, ತರ್ಕ, ಅನುಭವ, ಪ್ರತಿಭೆ, ಸೂತ್ರಬದ್ಧತೆ, ಭಾಷೆಯ ಬೆಡಗು, ವಸ್ತುನಿಷ್ಠತೆ, ಪ್ರಾಮಾಣಿಕತೆ, ದೈವೀಪ್ರೇಮ ಇವೆಲ್ಲವುಗಳ ಸಮುಚ್ಚಯವನ್ನೇ ಗುರುತಿಸಬಹುದು. ಇದೇನು ಚಿಕ್ಕ ಸಾಧನೆಯೆ! 'ಪ್ರಣತಿಗೆ ತೈಲದ ಸ್ನೇಹಯೋಗ,' ಎಂಬ ವಚನವು ಇದೇ ಬಗೆಯದು. ಇಲ್ಲಿ ಅನುಭಾವದ ಸಮನ್ವಯ, ಅಲ್ಲಿ ಸಾಹಿತ್ಯದ ಸಮನ್ವಯ. 'ಕನ್ನಡಿಯ ಕೊಳಬಹುದು ಕಳೆ ಕೊಳ್ಳಬಹುದೆ?' ಈ ವಚನವು ಕಾವ್ಯಮಯವಾಗಿದೆ.

ಕೊನೆಯಲ್ಲಿ ಕವಿ ತಾನು 'ಸಂಗಮದ ಅಂಗಳದ ಕೂಸಾ'ದರೂ ತಾನು ಬದುಕುವ ನೆಲದ ಇನ್ನುಳಿದ ದೀಪಗಂಬಗಳನ್ನೂ ಗುರ್ತಿಸಿದ್ದಾನೆ. ಕನ್ನಡ ನಾಡಿನಲ್ಲಿ ಇವು ಜಾಗೃತ ಸ್ಥಳಗಳಾಗಿವೆ. 'ಚಿತ್ತರಗಿ ವೀರವಿಜಯ ಮಹಂತನ ಬೆಳಕು, ಸಜ್ಜಲದ ಗಿರಿಮಾತೆಯ ಹೃದಯ ಬೆಳಗುವ ಬೆಳಕು, ಶಿವಯೋಗಮಂದಿರದ ಚಂದಿರನ ಸಿರಿ ಬೆಳಕು, ಸಿದ್ಧಲಿಂಗನ ಕಾಂತಿ, ಶಾಂತಿ ಬೆಳಕು' ಇವುಗಳಿಂದ ಸ್ಫೂರ್ತಿ ಪಡೆದಿದ್ದಾನೆ. ಅವುಗಳನ್ನು ಗೌರವಿಸಿದ್ದಾನೆ.

'ಒಂದರ ಮುಂದೆ ಒಂದಾಗಿ ಹನ್ನೊಂದಾಗಿತ್ತಯ್ಯ', 'ಸಮಾಂತರ ರೇಖೆಗೆ ಸಮನಾದ ಅಗಲಿಕೆಯ ಬೆಳಿಸಿಕೊಳ್ಳುವ ಚಿಂತೆ' ಈ ವಚನಗಳಲ್ಲಿ ಗಣಿತ, ಭೂಮಿತಿಗಳ ಕಲ್ಪನೆಗಳನ್ನು ಕಾವ್ಯಕ್ಕೆ ತರುವ ಹೊಸ ಪ್ರಯತ್ನವಾಗಿದೆ. ಭೂಮಿತಿಯ ಕಲ್ಪನೆಗಳನ್ನು ಶ್ರೀ ವಿ. ಕೃ. ಗೋಕಾಕರು ಕಾವ್ಯದಲ್ಲಿ ಈ ಮೊದಲು ಬಳಸಿದ್ದಾರೆ. ಆ ಹಾದಿಯಲ್ಲಿ ಇದೊಂದು ಸ್ವತಂತ್ರ ಪ್ರಯೋಗ.

'ಕುರುಡ ಬೆಳಕಿನೊಳಿದ್ದಂತೆ,' 'ಮಗುವಿನೊಳು ಪಡೆದವರ ರೂಪು ವ್ಯೈವೆತ್ತಂತೆ,' ಮೊದಲಾದವುಗಳು ಉತ್ತಮ ಉಪಮೇಯಗಳು. 'ಕಿಡಿಗೆ ಕಿಡಿ ಕೆದರಿಸುತ ಎದೆಗುಡಿಯ ಬೆಳಗಿಸಿದೆ,' 'ಕಿರಿಮೂಗು ಕರಿಬಣ್ಣ, ಸಿಕ್ಕ ಬೆಕ್ಕಿನ ಕಣ್ಣು,' ಇಲ್ಲೆಲ್ಲ ಅನುಪ್ರಾಸ, ಯಮಕ ಮೊದಲಾದ ಶಬ್ದಾಲಂಕಾರಗಳು ಪುಂಜಪುಂಜವಾಗಿ ಬಂದಿವೆ.

ಅರವಿಂದ, ಮಾತಾಜಿ, ಠಾಕೂರ, ಬಾಪೂಜಿ, ಬಾ, ಶಾರದಾ ಮಾತೆ ಮೊದಲಾದವರ ಆಧುನಿಕ ರಾಷ್ಟ್ರೀಯ ಜೀವನದ ಪ್ರಸ್ತಾಪ ವಚನಗಳ ವಸ್ತುವಾಗಿದೆ. ಶರಣರ ವಚನಗಳಂತೆ ಕಾಣುವ ಈ ವಚನಗಳನ್ನು ಓದುವಾಗ 'ಪ್ಲ್ಯಾಸ್ಟಿಕ್' 'ಫ್ಯಾಶನ್,' 'ಕ್ಲಬ್ಬು, ಫೋಟೋ ಓಸಿ, ಕಾರು, ಲಾಟ್ರಿ, ಸಿನೇಮಾ, ಚಹಾ, ಕಾಫಿ ಈ ಆಧುನಿಕ ವಿದೇಶೀ ಶಬ್ದಗಳು ಪ್ರತ್ಯೇಕತೆಯನ್ನು ತೋರಿಸಬಹುದು. ಆದರೆ ವಚನ-ಕಾರರು ಇಂದಿನ ನವ್ಯಕಾವ್ಯದ ಕಾಲದವರು, ಇಂದಿನ ಭಾಷೆಯನ್ನು ಅವರು ಬೆಳೆಸಬೇಕಾಗಿದೆ. ಆ ಶಬ್ದಗಳು ಇಂದು ಜೀವಂತ ಭಾಷೆಯಲ್ಲಿ ಅನಿವಾರ್ಯವಾಗಿವೆಯೆಂದು ತಿಳಿದಾಗ ಆ ಕಲ್ಪನೆ ಮರೆಯಾಗುತ್ತದೆ. ಅವನ್ನು ಧೈರ್ಯದಿಂದ ಕವಿ ಕಾವ್ಯಕ್ಕೆ ಬಳಸಿದ್ದಾನೆ. 'ಸಂಘ ಪಕ್ಷ' ಈ ಶಬ್ದಗಳು ಪ್ರಾಚೀನವಾದರೂ ಆಧುನಿಕ ಅರ್ಥದಲ್ಲಿ ಬಳಸಲ್ಪಟ್ಟಿವೆ. ತಲೆ ತುರಿಸು, ಮನಕಟ್ಟು, ಕರಿಹರಿ, ಕಸಿಮಾಡು, ಜಾತಿ ಎಣಿಸು, ಮೊದಲಾದ ದೇಶೀಯ ಬೆಡಗಿನ ಪಡೆನುಡಿಗಳನ್ನೂ ಡಬ್ಬುಗಳ್ಳಿ, ಮಳ್ಳರಂಡಿ, ಜನ್ನಿಗೆ, ಹಸಗೇಡಿ, ಹತ್ತಿಯಕಾಳ ತುಳಿ, ಮೊದಲಾದ ಆಡು ಮಾತಿನ ಶಬ್ದಗಳನ್ನೂ ವಚನಗಳಲ್ಲಿ ಬಳಸಿ ಕವಿಯು ಕಾವ್ಯದ ಭಾಷೆಯನ್ನು ಕಸುವುಗೊಳಿಸಿದ್ದಾನೆ. ಇದು ಜೀವಂತ ಕವಿಯ ಲಕ್ಷಣ.

ಕೆಲವು ವಚನಗಳಲ್ಲಿ ಶಬ್ದಗಳ ವಿಪುಲತೆಯು ಪ್ಪೈದೋರಿದೆ ಎನಿಸಿ-

ದರೂ ಅದೆಲ್ಲ ನಿರೂಪಣೆಯು ಸಹಜತೆಗೆ ಸಹಜವಾದದ್ದೆನಿಸುತ್ತದೆ. ಬಹಳ ವಚನಗಳಲ್ಲಿ ಭಾಷೆಯ ಬಿಗುವು, ಹದ, ಮೊಗಚು ಸಾಧಿಸಿದೆ.

'ಶಿವಕವಿ' ಎಂಬ ಪ್ರಶಸ್ತಿ ಪಡೆದ ಸಂಗಮೇಶ ಹೊಸಮನಿಯವರ ಮೇಲೆ ಶರಣ ಸಾಹಿತ್ಯದ ಪ್ರಭಾವವಾಗಿರುವದು ಸ್ವಾಭಾವಿಕ. ಆ ಸಾಹಿತ್ಯವನ್ನು ಅವರು ಆಳವಾಗಿ ಅಭ್ಯಸಿಸಿಯೂ ಇದ್ದಾರೆ. ಅದರ ಪ್ರಭಾವದಲ್ಲಿದ್ದೂ ಈ ವಚನಗಳಲ್ಲಿ ಅವರು ತಮ್ಮ ಸ್ವತಂತ್ರ ನಿರ್ಮಿತಿಯನ್ನು ಎಷ್ಟರ ಮಟ್ಟಿಗೆ ಪ್ರದರ್ಶಿಸಿದ್ದಾರೆಂದು ನಿರ್ಣಯಿಸುವದು ವಿಮರ್ಶೆಯ ಕೆಲಸ. ಒಟ್ಟಿನಲ್ಲಿ ವಚನಗಳು ವೈಚಾರಿಕವಾಗಿದ್ದು, ಅವನ್ನು ಬೇಗ ಬೇಗ ಓದುವದಕ್ಕಿಂತ ಮೆಲುಕು ಹಾಕಿದರೆ ಸ್ವಾದ ಹೆಚ್ಚು. ನಾವು ಬೇಗ ಓದಿದರೆ ಅವು ನಮ್ಮನ್ನು ಜಗ್ಗಿ ನಿಲ್ಲಿಸುತ್ತವೆ. ಹೀಗೆ ವಿಚಾರಿಸಲು ಹಚ್ಚುವ ಸಾಹಿತ್ಯವೇ ನಮಗಿಂದು ಬೇಕಾಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ರಂಗನಾಥ ದಿವಾಕರರು 'ಅಂತರಾತ್ಮನಿಗೆ' ನಿವೇದಿಸಿದ ಭಾವನೆಗಳು ಸುಂದರ ಗದ್ಯಕವನಗಳು. ಅಲ್ಲಿ ಸರಳ ಗದ್ಯವೇ ವಾಹಕ. ಶಿವಶರಣರ ನಂತರದಲ್ಲಿ ಇಂದು ಆ ಬಗೆಯ ಕಸು-ವಿನ ವಚನ ಸಾಹಿತ್ಯ ಒದಗಿಸಿದವರು ಪ್ರೊ। ಎಸ್. ವ್ಹಿ. ರಂಗಣ್ಣನವರು. ಅವರ 'ಸಂಗಯ್ಯನ ವಚನಗಳು' ಭಾಷೆ, ಭಾವ, ವಿಚಾರ ಪ್ರಚೋದಕತೆಗಳ ರಸಗವಳಗಳು. ಈ ಕ್ಷೇತ್ರದಲ್ಲಿ ಕೃಷಿ ಮಾಡಿದವರಲ್ಲಿ -ಕುವೆಂಪು, ಜ. ಚ. ನಿ., ಸಿದ್ದಯ್ಯ ಪುರಾಣಿಕ ಮೊದಲಾದವರಿರುವರು. ಇದೇ ಹಾದಿಯಲ್ಲಿ ಮತ್ತೊಂದು ಮಹತ್ವದ ಕೃತಿಯೆಂದರೆ ಸಂಗಮೇಶ ಹೊಸಮನಿಯವರ ಪ್ರಸ್ತುತ ವಚನಗಳು ಎಂದು ನಮ್ಮ ನಮ್ರ ತಿಳುವಳಿಕೆ.

ಹುಬ್ಬಳ್ಳಿಯ ಜಗದ್ಗುರು ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಧರ್ಮ ಪ್ರಕಾಶನ ಮೂರುಸಾವಿರ ಮಠದ ಗ್ರಂಥ ಮಾಲೆಯಲ್ಲಿ ಹಿಂದೆ ಇದೇ ಕವಿಗಳ 'ಹೂವು ಹಣ್ಣು' ಪ್ರಕಟವಾಗಿದೆ. ಪ್ರಸ್ತುತ ಕೃತಿಯು ಆ ಮಾಲೆಯಲ್ಲಿಯೇ ಪ್ರಕಟವಾಗುವದಿದೆಯೆಂದು ತಿಳಿದು ಪರಮಾನಂದವಾಗುತ್ತದೆ. ಇದು ಜಗದ್ಗುರುಗಳ ಸಾಹಿತ್ಯ ಪ್ರೇಮ, ಸಾಹಿತಿಗಳ ಬಗೆಗೆ ಗೌರವ, ಪ್ರೋತ್ಸಾಹಕರ ನಿಲುವೆಯ ದ್ಯೋತಕವಾಗಿರುವಂತೆ, ಕವಿಗಳ ಭಕ್ತಿಯ ದ್ಯೋತಕವೂ

ಆಗಿದೆ. ಅಲ್ಲದೆ ಆಧ್ಯಾತ್ಮ ಸಂಬಂಧಿ ವಚನಗಳು ಜಗದ್ಗುರು ಪೀಠದಿಂದ ಪ್ರಕಟವಾಗುವಲ್ಲಿ ಔಚಿತ್ಯವಿದೆ.

ಸಂಗಮೇಶ ಹೊಸಮನಿಯವರ ಸಾಹಿತ್ಯಕೃಷಿ, ಆಧ್ಯಾತ್ಮ ಸಾಧನೆ ಇನ್ನೂ ವೃದ್ಧಿಯಾಗುವಂತೆ ದಯಾಘನ ಚಿತ್ತರಗಿ ಕರ್ತೃ ವಿಜಯ ಮಹಾಂತೇಶ ಕರುಣಿಸಲೆಂದು ಹೃದಯಾರೆ ಹಾರೈಸುತ್ತೇವೆ.

ಇಲಕಲ್ಲ
೧೪-೧೧-೭೧

ಚಿತ್ತರಗಿ ಶಿವಾನುಭವ ಚರವರ್ಯ
ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು
ಸಂಸ್ಥಾನಮಠ, ಇಲಕಲ್ಲ

सत्यं शिवं सुंदरम् ।

ಪ್ರಣತಿಗೆ ತೈಲದ ಸ್ನೇಹಯೋಗ,
ತೈಲಕ್ಕೆ ಬತ್ತಿಯ ಸ್ನೇಹಯೋಗ,
ಬತ್ತಿಗೆ ಜ್ಯೋತಿಯ ಸ್ನೇಹಯೋಗ.
ನಂದಾದೀಪಕ್ಕೆ ನಿಮ್ಮ ಸ್ನೇಹದ ಯೋಗಾಯೋಗವಯ್ಯ;
ಕವಿಗೆ ನಿಮ್ಮ ಕರುಣೆಯ ಮಹಾಯೋಗವನ್ನಿತ್ತು
ಹೃದಯದೇಗುಲದಲ್ಲಿ ಬೆಳಗಿಸು ಶ್ರೀ ಸಂಗಮನಾಥ।

ಬನದ ಮರೆಯಲಿ ಕೂಗುವ ಕೋಗಿಲೆಯು ।
ಮಧುರ ಕೋಗಿಲೆಯೆ । ಮುದ್ದು ಕೋಗಿಲೆಯು ।
ಎನ್ನೆದೆಯ ಅಂಗಳದಿ ಕೂಗು ಬಾರಾ ॥
ಎಳೆ ಬಿಸಿಲಿನಲಿ ಕುಣಿವ ನವಿಲೆ ।
ಚೆಲುವ ನವಿಲೆ । ನಲುಮೆಯ ನವಿಲೆ ।
ನನ್ನ ಹೃದಯದ ಬೆಳಕಿನಲಿ ನಲಿಯಬಾರಾ ॥
ಮರದ ರೆಂಬೆಯೊಳು ಉಲಿಯುವ ಗಿಳಿಯೆ
ಮಾತಿನ ಗಿಳಿಯೆ । ಒಲುಮೆಯ ಗಿಳಿಯೆ ।
ನನ್ನ ನಾಲಿಗೆಯ ತುದಿಯೊಳು ನಿಂತು ಉಲಿಯಬಾರಾ ॥
ರೆಂಬೆಯೊಳು ನಲಿವ ಕಲೆಗಾರ ಗೀಜಗವೆ ।
ನೆಲೆಗಾರ ಗೀಜಗವೆ । ಅನುರಾಗಿ ಗೀಜಗವೆ ।
ನನ್ನ ಕರದೊಳು ಕುಳಿತು ಆಡು ಬಾರಾ ॥
ಬಾಂದಳದಿ ಒಂದಾದ ಸಿರಿಗೆರೆಯ 'ಕೊರಕೋಂಚಿ'
ಸ್ನೇಹಿ, ಸಹಕಾರಿಯೆ । ಸಹಜ ಶುಭಕಾರಿಯು ।
ಭಾವ ಬಾಂದಳದಲ್ಲಿ ಅಲೆಯ ಬಾರಾ ॥
ನಿಮಗಲ್ಲಿ ಬಿಡುವಿಲ್ಲವೆ ?
ನಿಮಗಿಲ್ಲಿ ಎಡೆ ಇಲ್ಲವೆ ?
ಎದೆದೆರೆದು ಕೇಳುವೆನು, ಕೇಳುವೆನು ಬಾರಾ ॥
ಕೂಗಿರೆ । ನಲಿಯಿರೆ । ಉಲಿಯಿರೆ ।
ನೀನಾರೆ ಹೇಳು । ಶ್ರೀ ಸಂಗಮನಾಥ ॥

ಒಂದರ ಮುಂದೆ ಒಂದಾಗಿ ಹನ್ನೊಂದಾಗಿತ್ತಯ್ಯ
ಒಂದು ಇನ್ನೊಂದಾದರೆ ಹನ್ನೊಂದಾಗುವದೇನಯ್ಯ ?
ಒಂದು ಮುಂದಾಗಿ ಹನ್ನೊಂದಾದ ಪರಿಯ ನೋಡಾ
ನಾನು ನಿಮ್ಮೊಳಗೊಂದಾದರೆ–
ಎಷ್ಟೊಂದರ ಎಣಿಕೆಯೋ ಕಾಣೆನಯ್ಯ !
ಒಂದಾಗಿಸಿ ಮುಂದಾಗಿಸು ಶ್ರೀ ಸಂಗಮನಾಥ ॥

೪

ಒಂದೆಂಬುವುದು ಪ್ರಕೃತಿಯ ನಿಯಮ,
ಎರಡೆಂಬುವುದು ವಿಕೃತಿಯ ನಿಯಮ,
ವಿಶ್ವದ ನಿಯತಿಗೆ ಗ್ರಹಗತಿ ಒಂದಾಗಿತ್ತು,
ಆತ್ಮನ ವಿಕಾಸಕ್ಕೆ ಆಧ್ಯಾತ್ಮ ಒಂದಾಗಿತ್ತು ನೋಡಾ !
ನೀನು ನನ್ನೊಳಗೊಂದಾಗಿ ಬಾರಾ ಶ್ರೀ ಸಂಗಮನಾಥ ॥

'ಅರಿತೆ'ನೆನ್ನುವ ಮತಿಗೆ ಹಗದಾರಿ ದೂರಾದೆ.
'ಕಂಡೆ'ನೆನ್ನುವ ಮನಕೆ ಯೋಜನ ದೂರಾದೆ.
ನುಡಿದು ತಿಳಿಸುವ ಬಾಯ್ಗೆ, ಬಲುದೂರ ದೂರಾದೆಯಯ್ಯ !

ಕಾಣಲಾಗದು ಮನ,
ಅರಿಯಲಾಗದು ಮತಿ,
ನುಡಿಯಲಾಗದು ಬಾಯಿ,
ನಿಸ್ಸೀಮ, ನಿರಾಭಾರಿ ನೀನಯ್ಯ !

ಎನ್ನಂತರಂಗದ ಕಣ್ಣು ತೆರೆದು
ಮತಿಗೆ ನಿಮ್ಮ ಸದ್ಗತಿಯನಿತ್ತು,
ಮೌನ ಮೊಗ್ಗೆಯೊಳು ಬಿರಿದು ಬಾರಾ
ಶ್ರೀ ಸಂಗಮನಾಥ ॥

ಮತಿಗೆ ಹಿರಿದೇಬನೆ ? ಕೃತಿಯು ಕಳೆಗೊಂಡಿತ್ತು,
ನುಡಿಗೆ ಹಿರಿದೇಬನೆ ? ನಡೆಯು ಕಳೆಗೊಂಡಿತ್ತು.
ಮತಿಯಿರದ ಕೃತಿ, ಸ್ಥಿತಿಯಿರದ ಗತಿ,
ಅಧೋಗತಿಗೆ ಎಡೆಗೊಳಿಸಿತ್ತು ನೋಡಾ।
ಮಗುವಿನೊಳು ಮೈದಾಳಿ ಬಂದಂತೆ,
ನಗೆದುಂಬಿ, ಬಗೆದುಂಬಿ, ಎದೆದುಂಬಿ ಬಾರಾ.
ಶ್ರೀ ಸಂಗಮನಾಥ ॥

## ೨೭

ಭಕ್ತಿಯಿಲ್ಲದ ಹಸಗೇಡಿ ನಾನಯ್ಯ ।
ಯುಕ್ತಿಯಿಲ್ಲದ ಕಿಡಿಗೇಡಿ ನಾನಯ್ಯ ।
ಮುಕ್ತಿಯನರಸದ ಅರಿವುಗೇಡಿ ನಾನಯ್ಯ ।
  ಕುರುಡ ಬೆಳಕಿನೊಳಿದ್ದಂತೆ,
  ಒಗೆಯುವ ಅಗಸ ನೀರಡಿಸಿದಂತೆ,
  ನನ್ನ ಸ್ಥಿತಿಯಾಗಿತ್ತು ನೋಡಾ ।
ಕಂದ ಬಾರಾ ಎಂದು ಬಂದು ಬಾಯ್ದೆರೆದೆ,
ಬಿಗಿದಪ್ಪಿ ತಲೆತಟ್ಟಿದೆ,
ಅಂತರಂಗವ ಮುಟ್ಟಿದೆ, ಮುಟ್ಟಿದೆ
ಮೈಮರೆತೆ ಮೈಮರತೆನಯ್ಯ ।
  ನೋಡಿರಬೇಕು,
  ಕಾಡಿರಬೇಕು,
  ಬೇಡಿರಬೇಕು,
  ಹಾಡಿರಬೇಕು,
ನನ್ನೊಳಗೆ ನೀನಿದ್ದು ಶ್ರೀ ಸಂಗಮನಾಥ ॥

ಕರುಳು ತಟ್ಟಿದ ಕೂಗು, ಕೂಗಾಯಿತೆ ?
ಹೃದಯ ಮಿಡಿತದ ಮಾತು, ಮಾತಾಯಿತೆ ?
ಮುತ್ತಿಟ್ಟು ಹಾಡಿಸಿದೆ, ಹಾಡಾಯಿತೆ ?

ತೊಡೆಯೇರಿ ತೊದಲುನುಡಿ,
ಮುದ್ದಿನಲಿ ಚಿಗಿತಕುಡಿ,
ಹಾಲುಂಬ ಹಸುಳೆಯೊಳು 'ಗಾಗೂ'ಗಾಯನವಯ್ಯ।

ದಟ್ಟಡಿ, ತಿಳಿಜೊಲ್ಲು, ಮಾತೃ ಹೃದಯಕೆ ಅಂದ,
ಈ ಅಂದ, ಈ ಚಂದ, ನಿನ್ನಂದ ನೋಡಾ।
ಶ್ರೀ ಸಂಗಮನಾಥ ॥

೯

ತಾಯಿಯೊಲುಮೆಯೊಳಿಳಿದು, ಎದೆಜೇನನಿತ್ತ,
ತಂದೆಯೊಳು ಮುಂದಾಗಿ ಬಲ, ಎದೆಯನಿತ್ತ,
ಗುರುವಿನೊಳು ಗುರುವಾಗಿ ದರ್ಶನವ ನೀಡಿದೆ।
ಆಪ್ತ, ಮಿತ್ರರ ಸ್ನೇಹ ಸುಳುವಿನೊಳು ಕಂಡೆ,
ಎಲ್ಲರೆದೆ ಮಲ್ಲಿಗೆಗೆ ಮಕರಂದ ನೀನಾದೆ.

ಮರಿದುಂಬಿ ಕವಿಗಾಗಿ ಕರುಣೆ ನೀಡಿದ ತಂದೆ।
ನಿಮ್ಮ ಉಪವನದಲ್ಲಿ 'ಗುಂಯ್‌ಗುಡು'ವ ದುಂಬಿಯನು
ಹಾಯಾಗಿ ಹಾರಾಡಿಸಯ್ಯ। ಶ್ರೀ ಸಂಗಮನಾಥ॥

ಕಿಡಿಗೆ ಕಿಡಿ ಕೆದರಿಸುತ ಎದೆಗುಡಿಯ ಬೆಳಗಿಸಿದೆ,
ಮತಿಗೆ ಮತಿ ಮಥಿಸುತ್ತ ಮೈಮರೆಸಿ ಬಿಟ್ಟೆ,
ಭಾವಲತೆ ಸಿರಿಗುಡಿಗೆ ಬಾಂದಳವ ತೋರಿಸಿದೆ.
ಆವ ಜನುಮದ ಪುಣ್ಯವೋ ಕಾಣೆನಯ್ಯ ।
ಒಡಿದೆಳೆದು, ಬಿಗಿದಪ್ಪಿ, ಕಣ್ಣೆಟ್ಟು ರಕ್ಷಿಸುವೆ
ಕೈ ನೀಡಿ ಸಾಗಿಸುವೆ
ಈ ಪರಿಯ, ಈ ಸಿರಿಯ—
ಹೇಳಲಾಗದು ಅಯ್ಯ ಶ್ರೀ ಸಂಗಮನಾಥ॥

೧೧

ಬೆಟ್ಟದಡಿ ಹುಲ್ಲಿಗೆ, ಮಧುರ ರಸವನ್ನಿತ್ತೆ,
ಹೂನೆಯ ಮಲ್ಲಿಗೆಯಲ್ಲಿ, ಪರಿಮಳವನಿತ್ತೆ,
ಕಲ್ಲಿನೊಳು ಥರಥರದಿ ಗೆರೆಯಾಗಿ ಸಿರಿಯಾದೆ,
ಹರಿವ ಗಂಗೆಯ ತೊರೆಗೆ 'ವರ'ವಾಗಿ ಬಂದೆ.
ಒಳಗಿದ್ದು ಹೊರಗಾದೆ,
ಹೊರಗಿತ್ತು ಒಳಗಾದೆ,
ಒಳಹೊರಗು ಒಂದಾದ ಚಂದಾದ ಈ ಬೆಡಗು,
ಪ್ರೈಹರೆಸುತಿರಲಯ್ಯ । ಶ್ರೀ ಸಂಗಮನಾಥ ॥

ಈ ಕರ್ಮಿಯನು ಧರ್ಮಿಷ್ಠರ ಉದರದಲಿ ಹುಟ್ಟಿಸಿದೆ,
ಈ ದುಷ್ಟನನು ಶಿಷ್ಟರ ಊರಿನಲ್ಲಿರಿಸಿದೆ,
ಈ ಕಳ್ಳನನು ಒಳ್ಳೆಯ ಓಣಿಯಲ್ಲಿರಿಸಿದೆ,
ಈ ಪಾಪಿಯನು ಪುಣ್ಯಪುರುಷರ ಸಹವಾಸದಲ್ಲಿರಿಸಿದೆ,
ಈ ಕೋಪಿಯನು ನಿಮ್ಮ ರಾಜಾಂಗಳದಿ
ಕಸಬಳಿಯಲಿಟ್ಟುಕೊಂಡೆ,
ಇಂತಪ್ಪ ಶಾಪಗ್ರಸ್ತನನು ಕಣ್ಣಿಟ್ಟು ಕಾಪಾಡುವಲ್ಲಿ
ಗುಣವೇನೊ । 'ರಿಣ'ವೇನೊ ।
ಬೆರಗಾದೆನಯ್ಯ । ಶ್ರೀ ಸಂಗಮನಾಥ ॥

'ಕಾಮಿ' ಕಣ್ಣಿಗೆ ಕಿಡಿಯು,
'ಹೊನ್ನಿಹುಳ'ಕಾರತಿಯು,
ಪಕ್ಕಿ ಕೋಗಿಲೆಗಿತ್ತೆ ಅಮರ ಗಾನ ।
ನವಿಲ ಸಿರಿಸೊಬಗೆಂದು ನೂರೆಂಟು ಕಣ್ಣಿತ್ತೆ
ಹುಲ್ಲಿನೊಳು ಹೂವಿತ್ತೆ ಘಮ ಘಮ ಘಮ ।

ಶರಣ ಸಂಪದವೆಂದು ನಿನ್ನನೇ ನೀನಿತ್ತೆ
ಪರದೇಸಿ ನನಗಾಗಿ ನೀನೇನನಿತ್ತೆ ?
ಎನ್ನೊಡೆಯ । ಜಗದೊಡೆಯ ।
ಹೇಳು । ಶ್ರೀ ಸಂಗಮನಾಥ ॥

ನಚ್ಚಿರುವ ಮನದಲ್ಲಿ ಮಕರಂದ ಸೂಸು,
ಮೆಚ್ಚಿರುವ ಪ್ರಾಣದಲಿ ತನಿಗಂಪನಿರಿಸು,
ಕಚ್ಚಿದರೆ ಹೃದಯದಲಿ ಅಮೃತವ ಸುರಿಸು,
ಇಚ್ಛೆಯಲಿ ಮೈದೋರಿ ಹಾರಿಬಾರಾ ।

ಕೆಚ್ಚಿರಲಿ, ಹುಚ್ಚಿರಲಿ, ನಿನ್ನಿಚ್ಛೆ ನನಗಿರಲಿ,
ನೀ ಮೆಚ್ಚಿ ಬಾರಾ । ಶ್ರೀ ಸಂಗಮನಾಥ ॥

ಬಗೆದುಂಬಿ, ನಗೆದುಂಬಿ, ನಲಿಯುತಿದೆ ಮಾಮರ ।
ಎಲೆಗೊಂದು ಅಮರಫಲ । ತಳಿರಿನೊಳು ನಿಮ್ಮ 'ವರ' ।
ತಣ್ಣೆಳಲಿನೊಳು ನಿಂತು ನಿರುಕಿಸುತಲಿರುವೆ ।
'ಹೆಳವ' ನಾ, ಈ ಮರವನೇರುವುದನರಿಯೆ ।

ಕೋಕಿಲೆಯು ಕೂಗುತಿದೆ,
ತುಂಬಿಗಳು ಪಾಡುತಿವೆ,
ತಂಗಾಳಿ—ತನಿಗಂಪು ತೀಡುತ್ತಲಿಹುದು,
ಅಮರ ಫಲವನು ಎದೆಯು ಬಯಸುತಿಹುದು ।
ಮಕರಂದ ತಂಗಾಳಿ, ಮಧುರ ಕೋಗಿಲೆಗಾನ,
ಕೂಗಿ ಕರೆದವು ಎನುತ ನೆಚ್ಚಿ ಬಂದೆ ।
ನಿಮ್ಮೊಡಲ ಕಂಪಿನೊಳು ಮೆಚ್ಚಿ ನಿಂದೆ ।
ಸುರಸ, ಸುಮಧುರ ಫಲವ ಬೇಡುತ್ತಲಿರುವೆ,
ನೀಡಲಾರೆಯಾ ದೊರೆಯೆ । ನಿಮ್ಮಡಿಯೊಳಿರುವೆ ।
ಮಾಗಿರುವ ಹಣ್ಣುಗಳ, ತೂಗಿ ಕೈಗಿರಿಸಯ್ಯ ।
ಶ್ರೀ ಸಂಗಮನಾಥ ॥

ಪರನಿಂದೆ, ಪರಪೀಡೆ–ಪಾಪವೆನೆ ಬೇರಿಲ್ಲ ।
ದ್ವೇಷ, ಈರ್ಷೆಯ ಜ್ವಾಲೆ–ತಾಪವೆನೆ ಬೇರಿಲ್ಲ ।
ಆಸಪನೆ, ಅಳಿಯಾಸೆ–ಕರ್ಮವೆನೆ ಬೇರಿಲ್ಲ ।
ಇದ್ದುದನು ಮರೆತು, ಇಲ್ಲದುದ ಬಯಸುವುದು,
ಜನುಮ ಜನುಮದ ಶಾಪವೆನೆ ಬೇರಿಲ್ಲ ।
ಹೃದಯದ ತಳಮಳ, ಕೊರಗು, ಉಕ್ಕಿಸುವ ಕಂಬನಿಯ-
ನೊರೆಸದಿರುವುದು ಅಧರ್ಮವೆನೆ ಬೇರಿಲ್ಲ ।

ಇದೆಲ್ಲದಕೆ ಅಂಜುವೆನು, ಅಳುಕುವೆನು ।
ಅಂಜುವೆನಂಜುವೆನಯ್ಯ । ಶ್ರೀ ಸಂಗಮನಾಥ ॥

ಹಾಲು ಸ್ಥಿತಿಗೆಟ್ಟು ತುಪ್ಪವಾಯಿತಯ್ಯ !
ನೀರು ಸ್ಥಿತಿಗೆಟ್ಟು ಪಾದೋದಕವಾಯಿತಯ್ಯ ।
ಬೂದಿ ಸ್ಥಿತಿಗೆಟ್ಟು ಭಸ್ಮವಾಯಿತಯ್ಯ ।
ಅನ್ನ ಸ್ಥಿತಿಗೆಟ್ಟು ಪ್ರಸಾದವಾಯಿತಯ್ಯ ।
ಮಾನವರು ಸ್ಥಿತಿಗೆಟ್ಟು ಶರಣರಾದರಯ್ಯ ।
ನನ್ನ ಈ ಸ್ಥಿತಿಗೆಡಿಸಿ ನಿನ್ನವನಾಗಿರಿಸಿದೆಯಯ್ಯ
ಶ್ರೀ ಸಂಗಮನಾಥ ॥

ಸರಳರೇಖೆಗೆ ಸಮರಸದ ಹೊಂದಿಕೆಯ
ಉಳಿಸಿಕೊಳ್ಳುವ ಚಿಂತೆ ।
ಸಮಾಂತರ ರೇಖೆಗೆ ಸಮನಾದ ಅಗಲಿಕೆಯ
ಬೆಳೆಸಿಕೊಳ್ಳುವ ಚಿಂತೆ ।
ಗುಣ ಒಂದಾದರೂ ಬಗೆ ಬೇರೆಯಯ್ಯ ।
ಸ್ಥಿತಿ ಒಂದಾದರೂ ಗತಿ ಬೇರೆಯಯ್ಯ ॥

ನಾ ಬೇರೆ, ನೀ ಬೇರೆ ಎಂದು ಎನಿತು
ಕಾಲ ಚಿಂತಿಸಿದರೇನು ?
ಸಮರಸಕೆ ಇಂಬಾಗುವದೇನಯ್ಯ ?
ಚಿಂತೆ ಚಿತೆಯಾಗದಿರಲಿ ।

ಒಂದಾಗಿರುವ ಚಿಂತನೆಯ ದಿವ್ಯಯೋಗವನ್ನು
ಕರುಣಿಸು ಶ್ರೀ ಸಂಗಮನಾಥ ॥

ಕತ್ತರಿಗೆ ಪ್ಯೆ ಎರಡು,
ಹಾವಿಂಗೆ ಜಿಹ್ವೆ ಎರಡು,
ಸಂಶಯದ ಮನದೆದುರು ಮಾರ್ಗವೆರಡು ।
ಸ್ಪರ್ಧೆಯೊಳು ಗುಂಪೆರಡು,
ತಾಮಸದ ದೃಷ್ಟಿ,ಒಗೆ ಎರಡೆ ಹನ್ನೆರಡು,
ಎರಡಾದ ಸ್ಥಿತಿಯಳಿದು ಒಂದಾಗಿಸು,
ಒಂದುಗೂಡಿದ ಹೃದಯ ಚಂದಾಗಿಸು,
ಮುಂದಾಗಿಸು ಶ್ರೀ ಸಂಗಮನಾಥ ॥

ಕಾರಿರುಳ ದಾರಿಯಲಿ, ಕೋಲ್ಮಿಂಚು ಇಳಿಯುತಿದೆ,
ಕಡಲೊಳಗೆ ಆಳ್ವಂಗೆ, ತೆಪ್ಪ ಕೈ ಸೇರುತಿರೆ,
ಮದಕರಿಯು ಎದುರಾಗೆ, ಮದ್ದಾನೆ ಎದುರಿಸಿರೆ,
'ಬಸ್ಸು' ಕಂದಕ ಧುಮುಕೆ, ಸಹಜ ಪಾರಾಗುತಿರೆ,

ಕಂಟಕದಿ ಕೈ ನೀಡಿ ಕರಕೊಂಡೆ ಎನುವೆ ।
ನಿಮ್ಮ ಕರುಣೆಯಿದೆಂದು ಕಣ್ಣೀರು ಕರೆವೆ ।

ಎದೆಯುಕ್ಕಿ ಬೆಳಗಿರಲು ಆ ಬೆಳಗಿನೊಳು ನಿಮ್ಮ
ಹೊಗಳಿ ಹಾರಾಡುವೆ, ಹಾಡುವೆನು ತಂದೆ ।

ಕಂಟಕದ ಅರಿವನ್ನು ಸುಖದ ಸುಗ್ಗಿಗು ನೀಡಿ
ಮುನ್ನಡೆಸು ಎನುವೆ ।

ಕಾಪಾಡು । ಕಾಪಾಡು । ಕಾಪಾಡು । ದೊರೆಯೆ ।
ಶ್ರೀ ಸಂಗಮನಾಥ ॥

ಬಳಗ ನೋಡದ ಕಾಗೆ,
ಅಗುಳ ನೀಡದ ಕೋಳಿ,
ಮಾತನರಿಯದ ಗಿಳಿಯು ನಾನಯ್ಯ ।
ಹಾಡಲಾರದ ಹಕ್ಕಿ,
ಹಾರಲಾರದ ಗರುಡ,
ಅಲೆಯಲಾಗದ ತುಂಬಿ ನಾನಯ್ಯ ।
ಈಸಲಾರದ ಮೀನು,
ಮೂಸಲಾಗದ ಹೂವು,
ಮೀಸಲಾಗದ ಪತ್ರಿ ನಾನಯ್ಯ ।

ನಂಬಲಾಗದ ಅಂಬಿಗನು ನಾನಾಗಿದ್ದೆನಯ್ಯ ॥
ಹಿಡಿತಂದು ಸಂಗಮದ ಅಂಗಳದಿ ನಿಲಿಸಿದಿರಯ್ಯ,
ನೀವೇಕೆ ನಂಬುವಿರೊ ?
ನೀವೇಕೆ ನಚ್ಚುವಿರೊ ?
ನೀವೇಕೆ ಮೆಚ್ಚುವಿರೋ ತಿಳಿಯದಯ್ಯ ।
ನಿಮ್ಮಿಚ್ಛೆಯ ಹುಚ್ಚೇನು ಹೇಳಾ ಶ್ರೀ ಸಂಗಮನಾಥ ॥

ಕಿರಿಮೂಗು ಕರಿಬಣ್ಣ,
ಸಿಕ್ಕ ಬೆಕ್ಕಿನ ಕಣ್ಣು,
ಗುಜ್ಜುಗೊರಳಿನ ಹೆಣ್ಣನಾರು ಮೆಚ್ಚುವರವ್ವ ?
ಇಳಿಬಿದ್ದ ಬೆಳೆವಲ್ಲು,
ಗೊಗ್ಗರದ ದನಿ ಸೊಲ್ಲು,
ಗಿಡ್ಡಿ, ಧಡ್ಡಿಯನಾರು ಯಾರು ಮೆಚ್ಚುವರವ್ವ ?
ಒಲುವಿಲ್ಲ, ಚೆಲುವಿಲ್ಲ,
ನೆಲೆಯಿಲ್ಲ, ಕಲೆಯಿಲ್ಲ,
ಬೆಲೆಕೊಡದ ಕನ್ಯೆಯನು ಯಾರು ಮೆಚ್ಚುವರವ್ವ ?

ಆ ಸಂಜೆಗೆಂಪಿನೊಳು
ಸಂಗಮದ ಅಂಗಳದಿ
ಮಿಂದು ಮಡಿಯಾಗುತಿರೆ
ಕಣ್ಣಿಟ್ಟು ನೋಡಿದನು ಕರುಣಾಳು ಆತ ।

ಕಣ್ಣಿಗೆ ಕಣ್ಣಿತ್ತನವ್ವ
ಬಣ್ಣಕ್ಕೆ ಬಣ್ಣವನೆ ಬರೆದನವ್ವ
ಈ ಹೆಣ್ಣಿನೆದೆ ಹೊಕ್ಕು ಹಣ್ಣಿಸಿದ ನೋಡವ್ವ ।

ನಕ್ಕು ನಗಿಸುತ ಕೈಹಿಡಿದ,
ಮೈಮರೆತೆ ! ಮೈಮರೆತೆ !
ಮುಂದೇನೊ................
ಅದೆಲ್ಲ ಶ್ರೀ ಸಂಗಮನಾಥನಿಗೇ ಗೊತ್ತು ನನ್ನವ್ವ !!

ನಂಬಲಾಗದ ಹೋಂತಿ
ನಚ್ಚಲಾಗದ ಹುಚ್ಚಿ
ಮೆಚ್ಚಲಾಗದ ಮೂರ್ಖ ಹುಡುಗಿ ನಾನಾಗಿದ್ದೆನವ್ವ !
ಅರಸಿನವನೆ ಮಿಂದು
ಹೋಂದುಡುಗೆಯನೆ ಉಟ್ಟು,
ಆಸರಿಲ್ಲದೆ ಅಲಪರಿಯುತ್ತಿದ್ದೆನವ್ವ !

'ಏನಿದರ ಕೀಸರ–
ಬಾಸರ' ವೆಂದು ನನ್ನವರು
ಈ ಅಬಲೆಯನು ಕೈಬಿಟ್ಟರವ್ವ ।
ಕಡೆಗಾದೆನವ್ವ, ಕಡೆಗಾದೆನವ್ವ !!

ಮತಿಗೆಟ್ಟೆ, ಗತಿಗೆಟ್ಟೆ
ಕೈಯೆತ್ತಿ ಕೂಗಿದೆ
ಎದೆದೆರೆದು ಮೊರೆಯಿಟ್ಟೆ
ಗೋಳಿಟ್ಟೆ, ಕೊರಗಿದೆ, ಮರುಗಿದೆನವ್ವ ॥

ಹೃದಯದ ಕೂಗು ಹೃದಯಕ್ಕೆ ಮುಟ್ಟದೇನವ್ವ ?
ಕರುಳಿನ ಕೊರಗು ಕರುಳಿಗೆ ತಟ್ಟದೇನವ್ವ ?

'ಬಾ' ಎಂದ, ಬಾ ಎಂದು ಎನ್ನೊಡೆಯ ದನಿಗೊಟ್ಟನವ್ವ
ಸುರಿವ ಕಂಬನಿಗಳನು ಕರವಸ್ತ್ರದಿಂದೊರಿಸಿ
ತಟ್ಟಿದನು, ಮುಟ್ಟಿದನು, ಮೈದಡವಿದನವ್ವ !
ಬಳ್ಳಿಗಾಶ್ರಯವಿತ್ತ,
ಕುಡಿಬಿಟ್ಟೆ, ಹೂವಾದೆ,

ಸಣ್ಣಾಗಿ, ಪಣ್ಣಾಗಿ, ಹೆಣ್ಣಾದೆ ಹೆಣ್ಣಾದೆನವ್ವ ।
ಆಗಾಗ ಪುರವಿಗೆ ಅರಿವಿತ್ತು,
ಎನ್ನೊಡೆಯ ಶ್ರೀ ಸಂಗಮನಾಥ ನಕ್ಕುನಗಿಸುವನವ್ವ ॥

ಮಂಡೆ ಬೋಳಿಸಿದರೇನು– ಮನಬೋಳಾಗದೆ ?
ಕಾವಿ ಧರಿಸಿದರೇನು– ದೇವಗುಣ ಬಾರದೆ ?
ಮುಪ್ಪು ಮೈಮರೆಸಿದರೇನು– ಒಪ್ಪುಗೂಡದೆ ?
ಸ್ವಾತಂತ್ರ್ಯ ಸ್ವಾತಂತ್ರ್ಯ ಅಂದರೇನು– ಸ್ವಾರ್ಥಬಿಡದೆ
ನಿಮ್ಮ ಪೂಜಿಸಿದರೇನು– ನಾನೆಂಬುದನಳಿಯದೆ?
ನಿಮ್ಮಂಗಳದ ಗಂಗೆಯೊಳು ಮುಳುಮುಳುಗಿದರೇನಯ್ಯ—
ಮನ, ಭಾವ, ಅಹಂಕಾರಗಳು ಮುಳುಗಿ ಮಡಿಯಾದವೆ ?

ಒಳಹೊರಗು ಶುಚಿಗೊಳಿಸಿ
ನಿಮ್ಮ ರುಚಿ ತಿಳಿಸಿ,
ಮುನ್ನಡೆಸು ಶ್ರೀ ಸಂಗಮನಾಥ ॥

ಆನೆ, ಅಂಬಾರಿ, ಪಲ್ಲಕ್ಕಿ, ಮೇಣೆಗಳು
ನಿಮಗೇರಲು ಇಲ್ಲ ।
ಕೋಡುಬಳೆ, ಚಕ್ಕುಲಿ, ಉಂಡಿ, ಹೆತ್ತುಪ್ಪ
ಉಣಲು ಇಲ್ಲ, ಕೊಡಲು ಇಲ್ಲ ।
ಜರಿಉಡುಗೆ, ಕಿರೀಟ, ಮುತ್ತು, ಮಾಣಿಕ
ಅರ್ಪಿಸಲು ಈ ಬಡವನಲ್ಲಿಲ್ಲ ।
ಜಯಘೋಷ, ಪರಾಕು, ಭರ್ಜರಿ ಉತ್ಸವಕೆ
ಮತವಿಲ್ಲ,
ಬಹುಮತಕೆ ಬಳಗದವರಿಲ್ಲ,
ಏಕಮತದಿಂ ಕರೆವೆ, ಬಾರಯ್ಯ ಮನೆಗೆ ।

ಕಳಕಳಿಯ ಪನ್ನೀರು ಮಜ್ಜನಕೆ ತರುವೆ,
ಕರುಳ-ಕನಿಕರ-ಪುಷ್ಪ ಪೂಜೆಗೀಡುವೆ,
ಎದೆಯುಕ್ಕಿ ಹಾಡುವೆ, ಪಾಡುವೆ,
ಕಣ್ದುಂಬಿಕಪ್ಪುರವ ಬೆಳಗುವೆ,
ಸೋನಿತ್ತ ಕಾಯಕದ ಅಂಬಲಿಯನುಣಬಡಿಸುವೆ,
ಎನ್ನೊಡೆಯ, ಎನ್ನರಸ ಬಾರಾ, ಬಡವನ ಮನೆಗೆ ।
ಶ್ರೀ ಸಂಗಮನಾಥ॥

ಕಂಡವರಲ್ಲಿ ಕಂಡಂತೆ ಕೆಡುಕನೇ ಅರಸಿದರೇನಯ್ಯ ?
ಉಂಡ ಮನೆಯಲ್ಲಿ ಜಂತಿಯನೆ ಎಣಿಸಿದರೇನಯ್ಯ ?
ಕಂಡದ್ದು ಕೆಂಡವಾಗದೇನಯ್ಯ ?
ಉಂಡಮನೆ ಹುಳುವಿನ ಕೊಂಡವಾಗದೇನಯ್ಯ ?
ಅದಕಾಗಿ ದ್ರೋಹದಂಡನೆಗಳೇಸೋ, ಎಣಿಸಲಾಗದು ನೋಡಯ್ಯ
ಕಂಡುಂಡ ತಪ್ಪಿಗಾಗಿ ದಂಡ ಕಟ್ಟುವೆಯೇನಯ್ಯ ?
ನಮ್ಮ ತಪ್ಪು ಅನಂತ, ನಿಮ್ಮ ಸೈರಣೆಗೆ ಎಣೆಯಿಲ್ಲ
ಕಾಣಾ, ಶ್ರೀ ಸಂಗಮನಾಥ ॥

ಕಲ್ಪನೆಗೆ ಕಾಲುಬಂದರೇನಯ್ಯ ?
ಬುದ್ಧಿಗೆ ಬಲವಿರದಿದ್ದಲ್ಲಿ ।
ಬುದ್ಧಿ ಬೆಳೆದರೇನಯ್ಯ
ಭಾವಕ್ಕೆ ಇಂಬಾಗದಿದ್ದಲ್ಲಿ ।

ಬುದ್ಧಿ ಭಾವಗಳ ಸಂಗಮದಲ್ಲಿ
ಹೃದಯಜಂಗಮ ಮಿಂದು
ನಿಮ್ಮಡಿಯ ಪಿಡಿಯಲದೆ ಭಾಗ್ಯವೆಂಬೆನಯ್ಯ
ಅಂಥ ಮಹಾಭಾಗ್ಯವನ್ನಿತ್ತು ಕರುಣಿಸು
ಶ್ರೀ ಸಂಗಮನಾಥ ॥

ಆಕಳ ಹಾಲು, ಎಕ್ಕಿಯ ಹಾಲು ನೋಟಕ್ಕೆ ಒಂದೇ
ಮಲ್ಲಿಗೆಯ ಹೂ, ಪ್ಲ್ಯಾಸ್ಟಿಕ್ ಹೂ ರೂಪಕ್ಕೆ ಒಂದೇ

ಬಣ್ಣ ಒಂದಾದರೇನು ? ಗುಣವಿರದಿದ್ದಲ್ಲಿ
ರೂಪ ಒಂದಾದರೇನು ? ಗಂಧವಿರದಿದ್ದಲ್ಲಿ
ನಾಟಕೀಯ ರೂಪ, ಬಣ್ಣಗಳು ತದ್ರೂಪವೇನಯ್ಯ ?
ಹೊರಬಾಳಿಗೆ ಸೋತು ಮೈಮರೆಯುವವರನು ಕಂಡು
ಶ್ರೀ ಸಂಗಮನಾಥ ನಗುವನಯ್ಯ ।

ಹೊಸ ಸೀರೆ ಉಡಲಾಗದು
ಹೊಸ ಜೋಡು ಮೆಡಲಾಗದು
ಹೊಸ ಅಧಿಕಾರವ ಹಿಡಿಯಲಾಗದು ನೋಡಯ್ಯ ।

ಹೊಸ ಯೌವ್ವನ. ತಡೆಯಲಾಗದು
ಹೊಸ ಮೊದಲಗಿತ್ತಿಯ ಒಯ್ಯಾರ ನೋಡಲಾಗದು
ನೋಡಯ್ಯ,

ಹೊಸ ಉತ್ಸಾಹದ ಉಕ್ಕಿಗೆ ನಿಮ್ಮ ಸೈರಣೆಯೆಂಬ
ತೀರ್ಥಜಲವ ಸುರುವಿ
ಉಕ್ಕಿಸದಿರು ! ಉಕ್ಕಿಸದಿರು ! ಶ್ರೀ ಸಂಗಮನಾಥ ॥

ಕಾವ್ಯಕ್ಕೆ ಪ್ರತಿಭೆಯ ಚಿಂತೆ,
ಪ್ರತಿಭೆಗೆ ಪರಿಶ್ರಮದ ಚಿಂತೆ,
ಪರಿಶ್ರಮಕೆ ಸಂಸ್ಕಾರದ ಚಿಂತೆ,
ಸಂಸ್ಕಾರಕ್ಕೆ ಭಾಷೆಯ ಚಿಂತೆ,
ಭಾಷೆಗೆ ಶೈಲಿಯ ಚಿಂತೆ,
ಶೈಲಿಗೆ ಭಾವದ ಚಿಂತೆ,
ಭಾವಕ್ಕೆ ಅನುಭಾವದ ಚಿಂತೆಯಯ್ಯಾ ।
ಅನುಭಾವಕ್ಕೆ ಸದಾ ನಿಮ್ಮ ಸ್ಮರಣೆಯ ಚಿಂತನೆಯ-
ನಿತ್ತು ಸಲಹು ಶ್ರೀ ಸಂಗಮನಾಥ ॥

ರೂಪಕ್ಕೆ ರಸದ ಸೊಬಗು.
ರಸಕ್ಕೆ ರಾಗದ ಸೊಬಗು.
ರಾಗಕ್ಕೆ ಅನುರಾಗದ ಸೊಬಗಯ್ಯ.
ಅನುರಾಗಕ್ಕೆ ವಿರಾಗವೇ ಸಿರಿಸೊಬಗಲ್ಲವೇನಯ್ಯ ।
ವಿರಾಗಿ–ಭಾವದುಂಬಿಗೆ ನಿಮ್ಮ ಚರಣಕಮಲದ
ಪರಾಗದ ಸೊಬಗನ್ನಿತ್ತು ರಕ್ಷಿಸು ಶ್ರೀ ಸಂಗಮನಾಥ ॥

ಗೊತ್ತು ಇದ್ದರೇನಯ್ಯ, ಗುರಿ ಇಲ್ಲದಿದ್ದರೆ ?
ಪತ್ತು ಇದ್ದರೇನಯ್ಯ, ಶಿಸ್ತು ಇಲ್ಲದಿದ್ದರೆ ?
ನಿತ್ಯವ್ಯಾಸಂಗವಿದ್ದರೇನಯ್ಯ, ನಿಜದ ನಿಲುಮೆ ಅರಿಯದಿದ್ದರೆ ?
ನಿತ್ಯನಿತ್ಯ ಸತ್ತು ಹುಟ್ಟುವದು ತಪ್ಪದಯ್ಯ
ಜೀವನಕೆ ಗುರಿಯಿರಲಿ, ಅರಿವಿರಲಿ,
ನಿನ್ನ ಕೃಪೆಯಿರಲಿ ಶ್ರೀ ಸಂಗಮನಾಥ ॥

ಕನ್ನಡಿಯ ಕೊಳಬಹುದು, ಕಳೆ ಕೊಳ್ಳಬಹುದೆ ?
ಕನ್ನಡಕ ಕೊಳಬಹುದು, ಕಣ್ಣು ಕೊಳಬಹು ?
ಪುಸ್ತಕವ ಕೊಳಬಹುದು, ವಿದ್ಯೆ ಕೊಳಬಹುದೆ ?
ಮೂರ್ತಿಯನು ಕೊಳಬಹುದು, ದೇವರನು ಕೊಳಬಹುದೆ ?

ದೇವರ ಬಗೆಗೆ ಆಡಿಹಾಡಿದ ಮಾತ್ರಕೆ
ದೇವತ್ವವ ಪಡೆಯಬಹುದೇನಯ್ಯ ?
ಒಂದಿದ್ದರೇನು ? ಒಂದಾಗದಿದ್ದರೆ,
ಒಂದಿತ್ತು ಒಂದಾಗಿಸು ಶ್ರೀ ಸಂಗಮನಾಥ ॥

ನೋಡುವ ಕಣ್ಣಿಗೆ ಬೆಳಕಿರದಿದ್ದರೇನು ಫಲ ?
ಆಡುವ ನಾಲಿಗೆಗೆ ಮಡಿವಂತಿಕೆ ಇರದಿದ್ದರೇನು ಫಲ ?
ಮಾಡುವ ಕೈಗೆ ನೀಡುವ ಶಕ್ತಿ ಇರದಿದ್ದರೇನು ಫಲ ?
ಆಡಿವ ಕೊರಳಲ್ಲಿಯ ಮೊಲೆಯಂತಾಯಿತ್ತಯ್ಯ
ನನ್ನ ಬಾಳುವೆ.
ನೋಡುವಲ್ಲಿ, ಆಡುವಲ್ಲಿ, ಮಾಡುವಲ್ಲಿ
ನೀನಿಳಿದು ಬಾರಾ, ಶ್ರೀ ಸಂಗಮನಾಥ ॥

ಸರಪಳಿಗೆ ನೂರೆಂಟು ಕೊಂಡಿಗಳಾದರೇನು ?
ಸರವೊಂದಾದರೆ ಸಾಕೆಂಬೆ.
ಸರಕ್ಕೆ ಸಾವಿರ ತೆರ ಮುತ್ತುಗಳಿದ್ದರೇನು ?
ಹಾರವೊಂದಾದರೆ ಸಾಕೆಂಬೆ.
ಮಾಲೆಗೆ ಸಹಸ್ರ ಸಹಸ್ರ ಬಗೆ ಪುಷ್ಪಗಳಿದ್ದರೇನು ?
ಕೊರಳ ಹಾರವೊಂದಾದರೆ ಸಾಕೆಂಬೆ.

ಈ ಜೀವ ಅನಂತಕೋಟಿ ಜೀವರಾಶಿಗಳನ್ನು
ಸುತ್ತಿ ಸುತ್ತಿ ಬಂದರೇನು ?
ನಿಮ್ಮ ಸ್ಮರಣೆವೊಂದಾದರೆ ಸಾಕೆಂಬೆಯಯ್ಯ.

ಹಿಂದಿನ ಕುಂದನ್ನೆಣಿಸದೆ ಒಂದುಗೂಡಿಸಿಕೊಂಡ
ಕಾರುಣ್ಯ ಖಣಿಯೆ !
ನಿಮ್ಮ ಔದಾರ್ಯವನು ಅಳೆಯಲಾಗದು ನೋಡಯ್ಯ
ಶ್ರೀ ಸಂಗಮನಾಥ !

೩೭

'ನಾ ಮಾಡುವೆ, ನಾ ಮಾಡುವೆ' ಎಂದರೇನಯ್ಯ
ನೀನು ಮಾಡಿಸುವಾಗ ?
'ನಾ ನೋಡುವೆ, ನಾ ನೋಡುವೆ' ಎಂದರೇನಯ್ಯ
ನೀನು ಇಳಿದಿರುವಾಗ ?
'ನಾ ಹಾಡುವೆ, ನಾ ಹಾಡುವೆ' ಎಂದರೇನಯ್ಯ
ನೀನು ಹಾಡಿಸುವಾಗ ?
'ನಾ ಆಡುವೆ, ನಾ ಆಡುವೆ' ಎಂದರೇನಯ್ಯ
ನೀನು ಆಡಿಸುವಾಗ ?
'ನಾ'ನೆಂಬ ನುಡಿ ಬಾಳಿಗೇ ನಗೆಪಾಟಲವಾಯಿತಯ್ಯ
ನಾನು ನೀನಾಗಿರಲು 'ನಾ'ನೆಂಬ ನುಡಿಯೇಕಯ್ಯ ?
ಈ ಮಾಯೆಯ ಮದವ ಮುರಿಯಯ್ಯ ಮುರಿಯಯ್ಯ
ಶ್ರೀ ಸಂಗಮನಾಥ ॥

ಹಾವು ಕೊರಳ ಹಾರವಾಗಿರಲಿ, ಹಲ್ಲಿನ ನಂಜನಳಿದರೆ
ಚೇಳು ಬೆರಳಿಗುಂಗುರವಾಗಿರಲಿ, ಕೊಂಡಿಯ ವಿಷವಳಿದರೆ
ಹುಲಿಯು ವಾಹನವಾಗಿರಲಿ, ಹಸುವಿನ ಹೃದಯ ಪಡೆದರೆ
ಮಾನವನು ಪಾವನನಾಗಿರಲಿ, ಅತಿಮಾನವತೆಯ ಐಸಿರಿ ಬಂದರೆ
ಹುಳುವೇನು ? ಮೃಗವೇನು ? ಎಲ್ಲವೂ ನೀನಿರುವಾಗ
ಶ್ರೀ ಸಂಗಮನಾಥ ||

ಬರಹದೊಳು ಬಲವಿತ್ತರೇನು ?
ಅರಿವು ಮೈಗೂಡದಿದ್ದರೆ ।
ವಿಚಾರದೊಳು ಬಲವಿತ್ತರೇನು ?
ಆಚಾರವು ಮೈಗೂಡದಿದ್ದರೆ ।
ಮಾತಿನೊಳು ಬಲವಿತ್ತರೇನು ?
ನೀತಿ ಮೈಗೂಡದಿದ್ದರೆ ।
ಖ್ಯಾತಿಯೊಳು ಬಲವಿತ್ತರೇನು ?
ಆತ್ಮ ಜ್ಯೋತಿ ಕಾಣದಿದ್ದರೆ ।

ಶ್ರೀ ಸಂಗಮನಾಥ ನನಗೆ ಏನಿತ್ತರೇನು ?
ನೀವಿರದಿದ್ದರೆ
ನೀನಿಳಿದು ಬಾರಾ ದೊರೆಯೆ ।
ಸೆರಗೊಡ್ಡಿ ಬೇಡಿಕೊಳುವೆ ॥

ಬಸವನಿಗೆ ಮೈದಡವಿ ಭಕ್ತಿ ಹೃದಯವನಿತ್ತೆ,
ಚನ್ನಬಸವಗೆ ನಿನ್ನ ಜ್ಞಾನವಿತ್ತೆ,
ಅಲ್ಲಮಗೆ ಎಲ್ಲರೆದೆ ಸಿರಿಪೀಠವಿತ್ತೆ,
ಮಹದೇವಿಯಕ್ಕನಿಗೆ ವೈರಾಗ್ಯ ನಿಧಿ ಇತ್ತೆ,
ಅಕ್ಕನೀಲಮ್ಮನಿಗೆ ದಾಸೋಹ ಮನೆಯಿತ್ತೆಯಯ್ಯ.

ಸಿದ್ಧರಾಮಗೆ ಮೆಚ್ಚಿ ಕರ್ಮಯೋಗವನಿತ್ತೆ,
ಹರಳಯ್ಯ, ಮದುವಯ್ಯನಿಗೆ ಕಾಯಕವನಿತ್ತೆ,
ಚಂದಯ್ಯ, ಚನ್ನಯ್ಯ, ಮಾರಯ್ಯ, ಕೇತಯ್ಯ-
ರಂಗಳದಿ ಭಕ್ತಿಯ ಹಂಗಿಗೊಳಗಾದೆ.

ಏಸೊಂದು ಏಸುಗಳು ಈಸಿ ಬಂದರೊ ಇಲ್ಲಿ
ಸಂಗಮದ ಅಂಗಳದಿ ಮಡಿಯಾಗಲು
ಏಸೊಂದು ನೆನಿಕೆಗಳನೆತ್ತಿ ತಂದರೊ ಇಲ್ಲಿ
ಶಾಂತಿ ಸನ್ನಿಧಿಯಲ್ಲಿ ಬೆಳಬೆಳಗಲು,

ಈ ಕೂಸು ತೇಲಿಸುತ ಕೈಗೆತ್ತಿಕೊಂಡೆ
ಕಣ್ದೆರಿಸಿ ನೋಡೆಂದೆ, 'ನೋಡು ಮಗು' ಎಂದೆ
ಯಾವ ಋಣವೋ ತಂದೆ !
ಏನು ಹೇಳಲಿ ಮುಂದೆ ! ಶ್ರೀ ಸಂಗಮನಾಥ

ನೀಡಯ್ಯ, ನೀಡಯ್ಯ, ನೀಡಯ್ಯ ದೊರೆಯೆ
ದಾನಿಗಳ ಮನೆಯೆಂದು ಓಡಿ ಬಂದಿರುವೆ.
ನೋಡಯ್ಯ, ನೋಡಯ್ಯ, ನೋಡಯ್ಯ ದೊರೆಯೆ
ನೋಡುವರ ಮನೆಯೆಂದು ನಂಬಿ ಬಂದಿರುವೆ.
ಕೇಳಯ್ಯ, ಕೇಳಯ್ಯ, ಕೇಳಯ್ಯ ದೊರೆಯೆ,
ಕೇಳುವರ ಮನೆಯೆಂದು ಹೇಳ ಬಂದಿರುವೆ.
ಅಂಗಳವು ಬೆಳಗುತಿದೆ, ಮಂಗಳದ ಮುದ್ರೆಯಲಿ
ತಲೆಬಾಗಿಲದ ನೊಸಲು ಭಸ್ಮ ಬಳಿದಿಹುದು,
ಕಲ್ಯಾಣಕಳಸವದು ಹೊಳೆಯುತಿಹುದಯ್ಯ.
ಹಸಿವ ಹರಿವಾಣವನು ಹಿಡಿದು ಒರಲುತಲಿರುವೆ
ನಿಮ್ಮ ಕರುಣ ಪ್ರಸಾದದಿ ತುಂಬಿಸಯ್ಯ
ಶ್ರೀ ಸಂಗಮನಾಥ ॥

ನಾನು ಮಾಡಿದ ಕೆಲಸ ಅಲ್ಪವಿದ್ದು
ನನ್ನ ಕಾರ್ಯ ಘನವೆಂದು ಜನ ಹೊಗಳಿದರೆ
ಅದು ನನ್ನ ಕರ್ಮವೆಂಬೆ.
ನನ್ನ ಕಾರ್ಯ ದೊಡ್ಡದಿದ್ದು ನನ್ನವರು ಅಲ್ಪವೆಂದರೆ
ಅದು ನನ್ನ ಪುಣ್ಯದ ಫಲವೆಂಬೆ.

ಪ್ರಕಾಶ ಪ್ರಿಯತೆಯನಳಿಸಿ ಸುಳಿದೆಗೆದು ಬೆಳೆವಂತೆ
ಕರುಣಿಸು ಶ್ರೀ ಸಂಗಮನಾಥ ॥

ಡೋಣಿ ಏರಿದೆನೆಂದು, ಪಯಣ ಮರೆಯುವುದೆ ?
ಮದುವೆಯಾಯಿತೆಂದು, ನಲ್ಲನ ಮರೆಯುವುದೆ ?
ಪುಷ್ಪ ತಂದೆನೆಂದು, ಪೂಜೆ ಮರೆಯುವುದೆ ?
ಮಾತಿನೊಳು ಕಂಡು, ನೀತಿಯೊಳು ತಪ್ಪಿದರೆ
ದೇಗುಲವ ಕಂಡು, ದೇವರನು ಮರೆತಂತಾಗಿತ್ತಯ್ಯ
ಒಡಿದುದನು ಕಡೆಗಾಣಿಸಿ ಕಾಪಾಡು,
ಶ್ರೀ ಸಂಗಮನಾಥ ॥

ಉತ್ತುವ ಮುನ್ನವೆ ಬೀಜವ ನೋಡಬಾರದೇನಯ್ಯ ?
ಕೆತ್ತುವ ಮುನ್ನವೆ ಕಟ್ಟಿಗೆಯ ನೋಡಬಾರದೇನಯ್ಯ ?
ಕಟೆಯುವ ಮುನ್ನವೆ ಸಿಲೆಯ ನೋಡಬಾರದೇನಯ್ಯ ?
ಭಾವಗದ್ದುಗೆಯಲ್ಲಿ ಬಿತ್ತುವ ಮುನ್ನವೇ
ಜೀವ ಜಂಜಡದ ಕಳೆಯ ಕೀಳದಿದ್ದರೇನಯ್ಯ ?
ಕಳೆಯಾವುದು ? ಬೆಳೆಯಾವುದು ?
ಹೊಲ ಹಸಿರಾದರೇನಯ್ಯ ?
ಬೆಳೆಯೆಲ್ಲಿ ? ಕಳೆಯೆಲ್ಲಿ ? ಶ್ರೀ ಸಂಗಮನಾಥ ॥

ನಾನು ದೊಡ್ಡವನೆಂಬೆನೆ, ನಮ್ಮೂರು ದೊಡ್ಡದು,
ನಮ್ಮೂರು ದೊಡ್ಡದೆಂಬೆನೆ, ನನ್ನ ನಾಡು ದೊಡ್ಡದು,
ನಾಡು ಹಿರಿದೆಂಬೆನೆ, ನೆಲ ದೊಡ್ಡದು.
ನೆಲ ಹಿರಿದೆಂಬೆನೆ, ಜಲವು ಬಲುಹಿರಿದು–
ಜಲವು ಹಿರಿದೆಂಬೆನೆ, ಜಗವು ಹಿರಿದಯ್ಯ,
ಜಗತ್ತು ಹಿರಿದೆಂಬೆನೆ, ವಿಶ್ವ ಇವೆಲ್ಲಕೂ ಹಿರಿದು,
ವಿಶ್ವ ಹಿರಿದೆಂಬೆನೆ, ವಿಶ್ವವ್ಯಾಪಿ ವಿಶ್ವಚಾಲಕ
ನೀನು ದೊಡ್ಡವನಯ್ಯ !
ನೀನು ಹಿರಿದೆಂಬೆನೆ, ನಿನ್ನ ನೆನೆವ ಭಕ್ತರ ಭಕ್ತ ನೀನು,
ಅದಕಾಗಿ ನಿಮ್ಮ ಭಕ್ತರ ಹಿರಿಮೆಯನರಿಯುವುದೇ
ನಿಮ್ಮನರಿಯುವ ಸಾಧನೆ ನೋಡಾ ಶ್ರೀ ಸಂಗಮನಾಥ !!

ಕೋಪ ಪಾಪದ ಫಲ, ತಾಪ ಕರ್ಮದ ಫಲ,
ಈ ಕೋಪ ತಾಪಗಳು ಜನುಮ ಜನುಮದ–
ಶಾಪಗಳು ನೋಡಾ !
ಕೋಪಿಸದಿರಾ ಮನವೆ ! ಕಳವಳಿಸದಿರಾ ಮನವೆ !
ಶ್ರೀ ಸಂಗಮನಾಥನ ನೆನೆ ಮನವೆ ! ನೆನೆ ಮನವೆ !
ಕೋಪ ತಾಪಗಳನಳಿದು ಶಾಂತಿಸಾಗರದೊಳಿಳಿಸುವ

ನನಗಾಗಿ ಬೇಡುವ ಕೈಕೊಟ್ಟು
ನೀ ದಂಡಿಸಿದೆಯಯ್ಯ !
ನನಗಾಗಿ ಹಾಡುವ ಬಾಯಿಕೊಟ್ಟು
ನೀ ದಂಡಿಸಿದೆಯಯ್ಯ !
ನನಗಾಗಿ ನೋಡುವ ಕಣ್ಣುಕೊಟ್ಟು
ನೀ ದಂಡಿಸಿದೆಯಯ್ಯ !
ನನ್ನ ಬಣ್ಣನೆಯನ್ನೇ ಕೇಳುವ ಕಿವಿಕೊಟ್ಟು
ಭವಬಂಧನದಲ್ಲಿರಿಸಿದೆಯಯ್ಯ !

ನಿನಗಾಗಿ ಬೇಡುವ,
ನಿನಗಾಗಿ ಹಾಡುವ,
ನಿನ್ನನೇ ನೋಡುವ
ನಿನ್ನ ಕೀರ್ತಿಯನ್ನೇ ಪಾಡುವ
ಸಂಪದವಿತ್ತು ಕರುಣಿಸು ಶ್ರೀ ಸಂಗಮನಾಥ !!

ಕಿತ್ತಿದರೆ ಕೀಳದ ಹೆಮ್ಮರವು ನೀನಯ್ಯ ।
ಒತ್ತಿದರೆ ಬಾಡದ ಮಂದಾರಪುಷ್ಪ ನೀನಯ್ಯ ।
ಸುತ್ತಿದರೆ ಮುಗಿಯದ ಅಮೃತದ ಕಡಲು ನೀನಯ್ಯ ।

ಕಡಿದಷ್ಟು ಸಿಹಿ । ಹಿಡಿದಷ್ಟು ಕೋಮಲ ।
ಕುಡಿದಷ್ಟು ರಸಗವಳ ನೀನಯ್ಯ ।

ಭಕ್ತಿ ಬೀಜದ ಲತೆಗೆ ಮೊದಲೆಲ್ಲಿ ? ಕಡೆ ಎಲ್ಲಿ ?
ಕೈಮುಟ್ಟಿ, ಕುಡಿಗಟ್ಟಿ
ನಿಮ್ಮ ಹಂದರದಿ ಹಬ್ಬಿಸು ಶ್ರೀ ಸಂಗಮನಾಥ ॥

  

ಮೈಯ್ಯ ಕುಣಿಸಿದರು ಮನ ಕುಣಿಯಲಿಲ್ಲ,
ಜಿಹ್ವೆ ಕುಣಿಸಿದರು ಭಾವ ಕುಣಿಯಲಿಲ್ಲ,
ಕಂಠ ಕುಣಿಸಿದರು ಹೃದಯ ಕುಣಿಯಲಿಲ್ಲ.

ಕುಣಿದವರು ಧಣಿಯಾದರಲ್ಲದೆ
ನಿನ್ನ ಮಣಿಯಾಗಲಿಲ್ಲವಯ್ಯ ।

ಮನ, ಬುದ್ಧಿ, ಭಾವಗಳಲ್ಲಿ
ನೀನಿಳಿದು ನರ್ತಿಸು ಶ್ರೀ ಸಂಗಮನಾಥ ॥

ಕೈಯೊಳಗೆ ಲೇಖನಿಯನಿತ್ತು
ಪರಕಿಸಿದೆಯಯ್ಯ ನೀನು ।
ಮೈಯ್ಯೊಳಗೆ ಬಲವನಿತ್ತು
ಪರಕಿಸಿದೆಯಯ್ಯ ನೀನು ।
ಇವೆಲ್ಲವುಗಳನು ನನಗಾಗಿ ನೀನೊಡ್ಡಿದ
ಕಂಟಕಗಳೆಂಬುವುದನು ಅರಿಯದೇ ಹೋದೆನಲ್ಲ ।

ಏನಿದ್ದರೇನು ?
ನೀನಿಲ್ಲದ ಪರಿ ಪರಿಹಾಸ್ಯವಯ್ಯ ।
ನಿನ್ನನರಿಯದ ಮನ ಮರ್ಕಟ ನೋಡಯ್ಯ ।

ಇರದಿದ್ದರಿರಲಿ ಕುಂದಿಲ್ಲ, ಕಳವಳವಿಲ್ಲ

ನನ್ನೊಂದಿಗೆ ನೀನಿದ್ದರೆ ಸಾಕು ಶ್ರೀ ಸಂಗಮನಾಥ ॥

ಕತ್ತೆಗೆ ಹತ್ತಿಯಕಾಳ ತುಳಿಯ
ನಿಟ್ಟರೇನಯ್ಯ ?
ಚಿತ್ತ ಚಂಚಲನಿಗೆ ಭಕ್ತಿಯ ಬೀಜವ
ನಿತ್ತರೇನಯ್ಯ ?
ಬಂಜೆ ಬಾಣಂತಿಯಲ್ಲ ।
ಎಕ್ಕಿಯ ಇಂಜರ ಅರಳೆಯಲ್ಲ ।

ಸೊಕ್ಕಿಗೇರಿದ ನನಗೆ ನೀವು.-
ಏನಿತ್ತರೇನಯ್ಯ ?

ಮನದ ಮದವ ಮುರಿದು
ಕರುಣಿಸಿ ಕಾಪಾಡು ಶ್ರೀ ಸಂಗಮನಾಥ ॥

ಕಾಗೆಗೆ ಹೀಗಳೆಯಲಾರೆ,
ಅದಕೆ ಬಳಗದ ಚಿಂತೆ ।
ಹುಲ್ಲಿಗೆ ಕೀಳೆನಲಾರೆ,
ತುರುಗಳ ಹಸಿವ ಅಡಗಿಸುವ ಚಿಂತೆ ।
ಹಾವಿಗೆ ಕೆಡಕೆನಲಾರೆ,
ಅದಕೆ ಮಾನವರಿಂದ ದೂರಿರುವ ಚಿಂತೆ ।
ಸಕಲ ಜೀವಿಗಳಿಗೆ ಲೇಸನೇ ಬಯಸುವ
ಬಲವಿತ್ತು ಸಲಹು ಶ್ರೀ ಸಂಗಮನಾಥ ॥

ಬರೆದು ಬರೆದು ಕೆಟ್ಟೆವು ಬಲವಿಲ್ಲದೆ,
ಓದಿ ಓದಿ ಕೆಟ್ಟೆವು ಫಲವಿಲ್ಲದೆ,
ಆಡಿ ಆಡಿ ಕೆಟ್ಟೆವು ಗೆಲುವಿಲ್ಲದೆ,
ನೋಡಿ ನೋಡಿ ಕೆಟ್ಟೆವು ಒಲುವಿಲ್ಲದೆ
ಕೆಟ್ಟ ಅಡಿಗೆಯನು ಅಟ್ಟುಂಬ ಪ್ರಾಸಾದಿಕ
ಶ್ರೀ ಸಂಗಮನಾಥ ನೀವೇ ಗತಿ ಎಮಗೆ ॥

ಕತ್ತೆಯ ಹಣೆಗೆ ಮೂಲಂಗಿ ಕಟ್ಟಿದಂತಾಯಿತ್ತಯ್ಯ
ನನ್ನ ಬಾಳಿನಲಿ ।
ಬಾಯಿ ಮುಚ್ಚಿದರೆ, ಮೆಲುವ ಚಿಂತೆ
ಮುಖವನೆತ್ತಿದರೆ ಮುನ್ನಡೆವ ಚಿಂತೆ

ಆಳಿಯಾಸೆಯೇ ಹೋರಾಟವಾಯಿತ್ತಲ್ಲ ಬಾಳಿನಲಿ

ಮೂಲಂಗಿಯ ಬಿಚ್ಚಿ
ನಿನ್ನ ಲಿಂಗಮುದ್ರೆಯನೊತ್ತು ಶ್ರೀ ಸಂಗಮನಾಥ ॥

ನೆಲವನರಸುವ ಕಾಲು,
ಇಲ್ಲದಂತೆ ಮಾಡಯ್ಯ ।
ಕುಲವನರಸುವ ನಾಲಗೆ
ಇಲ್ಲದಂತೆ ಮಾಡಯ್ಯ ।
ನಿಲುವನರಿಯದ ಕಣ್ಣನೇಕೆ ಕೊಟ್ಟೆ ಶ್ರೀ ಸಂಗಮನಾಥ
ನನಗಾಗಿ
ಶುಕ, ಪಿಕ, ಎರಳೆಗಳಿರಲಿಲ್ಲವೆ, ?

'ನಾನು ಹೇಗೆ ಮಾತನಾಡುವೆ' ಎಂಬುದು ಮುಖ್ಯವಲ್ಲ,
'ನನ್ನ ನಡವಳಿಕೆ ಎಂತಿದೆ' ಎಂಬುದೇ ದಿಟವು ।
'ನಾನು ಹೇಗೆ ಬರೆಯುವೆ' ಎಂಬುದು ಮುಖ್ಯವಲ್ಲ,
'ನಾನು ಹೇಗೆ ಇರುವೆ' ಎಂಬುದೇ ದಿಟವು ।
ನೂರನಾಡಿ, ನೂರು ಹಾಡಿ, ನೂರು ಬರೆದರೇನು ಫಲ ?
ನಿನ್ನ ಕಾಡಿ ಕಾಡಿ ಖತಿಗೊಳಿಸಿದ ಪಾಪ
ನನ್ನದಾಯಿತ್ತಯ್ಯ.
ನಾಟಕ ರಾಮನು ಶ್ರೀರಾಮನಾದನೆ ?
ಒಡಲು ತುಂಬುವ ಬೂಟಾಟಿಕೆಯ
ನಡಿಸಿದವರ ಮೆಚ್ಚ ಶ್ರೀ ಸಂಗಮನಾಥ॥

ಎತ್ತ ನೋಡಿದಡತ್ತ ನಿಮ್ಮ ಸಿರಿ, ಐಸಿರಿ,
ಎಲ್ಲಿ ನೋಡಿದಡಲ್ಲಿ ನಿಮ್ಮ ಲೀಲೆಯ ಲೀಲೆ,
ಮೊಗ್ಗೆಯೊಳು ಮೈದಾಳಿದೆ,
ಹೂವಿನೊಳು ನಲಿದಾಡಿದೆ,
ಹೀಚು, ಹಣ್ಣಿಗೆ ನೀನು ಒಗರಾದೆ, ಸಿಹಿಯಾದೆ
ಸರ್ವಾಂತರ್ಯಾಮಿ ! ಒಳಗಿದ್ದು ಹೊರಗಾದೆ,
ನಿಮ್ಮ ಸಿರಿಯನರಿಯುವ
ಒಗೆ ನೀಡಿ ಸಲಹು ಶ್ರೀ ಸಂಗಮನಾಥ !!

ಕೋಟಿಕೋಟಿ ಮುಖ, ಕೋಟಿಕೋಟಿ ಕುಸುಮ !
ಅನಂತ ತರುಪುರ !
ಬಗೆ ಬೇರೆ, ರಸ ಬೇರೆ, ರುಚಿ ಬೇರೆ !
ವಿಶ್ವಬ್ರಹ್ಮನೆ ಕುಂಚ ಆಡಿಸಿದೆಯಯ್ಯ !

ರಂಗುರಂಗಿಗೆ ತುಂಬ ಮಂಗಳದ ಮುದ್ರೆ !
ಸಿರಿಯು, ಸರಸತಿ ಸೊಬಗಿಗೆಲ್ಲಿಹುದು ನಿದ್ರೆ ?
ಸೌಂದರ್ಯ, ಶೃಂಗಾರ, ಬಂಗಾರವೆಲ್ಲ !
ಚಲುವು ಒಲುವಿಗೆ ಮುಡಿಪು ನಿನ್ನ ಕಲೆಯೆಲ್ಲ !

ಒಂದರಂತೊಂದಿರದ, ಒಂದರೊಳು ಕುಂದಿರದ
ಕಲೆಯ ನೋಡಯ್ಯ !
ಮುಕ್ತ ಹೃದಯದಿ ಹರಸಿ ಬಿಟ್ಟಿರುವೆಯಲ್ಲ !
ಏಕಿನಿತೊ ಒಲುಮೆ ? ಯಾಕಾರೆ ಈ ದುಡುಮೆ ?
ಬಿಡಿಸಿಟ್ಟೆ ಬಳಸದೆ, ನೀಡಿರುವೆ ಬಯಸದೆ !
ಏನಿಹುದೊ ಇದರಲ್ಲಿ ನಿಮ್ಮ ಸ್ವಾರ್ಥ !
ಏನಾರೆ ಹೇಳಿದರೆ ಆದೀತಪಾರ್ಥ !!

ಮಗುವಿನೊಳು ಹಡೆದವಳ ರೂಪು ಮೈವೆತ್ತಂತೆ,
ಅಡಿಯಿಂದ ಮುಡಿವರೆಗೆ ಮುಂದಾಗಿ ನಗುತಿಹುದು
ಇದು ನಿಮ್ಮಲೀಲೆ ! ನಿಮ್ಮ ರೂಪದ ರೂಪ !
ನಿಮ್ಮ ಒಲುವಿನ ಒಲುವು, ನಿಮ್ಮ ಚಲುವಿನ ಚಲುವು
ನೀವು ಸೃಷ್ಟಿಸಿದ ಸೃಷ್ಟಿ ಎನಬಹುದೆ ?
ಅದಕೆಂದೆ ಜಗವೆಲ್ಲ ಮೈಮರೆಯುತಿಹುದೆ ?
ಇದರರ್ಥ ಹೇಳಿ ಮೈಮರೆಸಿ ಮುನ್ನಡಿಸು
ಶ್ರೀ ಸಂಗಮನಾಥ !!

ನೀನೇಕೆ ನಗುತಿರುವಿಯೋ ಕಾಣೆನು
ಬೆಳ್ಳನೆಯ ಬೆಳದಿಂಗಳಲಿ ನಗುತಲಿರುವೆ,
ಕಾರಿರುಳ ರಾತ್ರಿಯೊಳೂ ನಿನ್ನ ನಗೆಯು
ಬಿರುಗಾಳಿ ಬೀಸಿದರೂ ಅಂಥ ಬಗೆಯು.
ತೊಡೆಯೊಳಾಡುವ ಕೂಸು ಅಳುವಾಗ ನಗುವೆ
ಹಸಿದು ಕಿರುಚುತಲಿರಲು ನಿನ್ನ ನಗೆಬಗೆಯೆ ?
ನಿನ್ನ ಪ್ರಸನ್ನತೆಯು ಸೂಸಿಸೂರಾಡುತಿದೆ,
ನಿನ್ನ ಹೆಬ್ಬಯಕೆಯಲಿ ಏನಿಹುದು ದೊರೆಯೆ ?
'ಮಿಕಿಮಿಕಿ' ಮುಖನೋಡಿ ಅರಸುತ್ತಲಿರುವೆ.
"ನಿಮ್ಮ ಭಾಗ್ಯದ ಕೊಡುಗೆ ನಮಗೆ ಇರಲಿ.
ಆ ದಾರಿಯೊಳು ನಾವು ಮುನ್ನಡೆಯಲಿ"
ಎಂಬಾಸೆಯೋ ನಿನಗೆ ?
ಮೊಲೆಯ ಹಾಲುಣುವ ಮಗುವಿಗೆ.
ಮನದ ಹಾಲುಣ್ಣಿಸಿ ಕಾಪಾಡು ಶ್ರೀ ಸಂಗಮನಾಥ !!

ನಡುಮನೆಗೆ ಕರೆದರೆ,
'ತೊಡೆಯೋಲಾಡುವೆ' ಎನುವೆ !
ಮುಂಬರಿದು ಕೈಚಾಚೆ
ಎದೆಗುಡಿಯ ಬಯಸುತಿಹೆ !
ಮೈದೆರೆದು ಎದೆ ನೀಡೆ,
ಕೈಹಿಡಿದು ಕುಣಿ ಎನುವೆ !
　　'ಮಣಿದಂತೆ ಮಣಿ' ಎನುವೆ,
　　'ಕುಣಿದಂತೆ ಕುಣಿ' ಎನುವೆ,
　　'ದಣಿದಂತೆ ದಣಿ' ಎನುವೆ !!
ದಣಿವಾಗುತಿರಲೆನಗೆ,
ನಗು ಎನುವೆ, ನಲಿ ಎನುವೆ !
ಇದು ಎಂಥ ಒಲುಮೆ ? ಎಂದಿರದ ಜುಲುಮೆ ?
ಹುಡುಗಾಟವೇನಯ್ಯ ಶ್ರೀ ಸಂಗಮನಾಥ !!

ಮುಖವೊಂದು, ರೂಪ ಬೇರೆ,
ಹೂವೊಂದು, ಗಂಧ ಬೇರೆ,
ತಲೆಯೊಂದು, ಬುದ್ಧಿ ಬೇರೆ,

ಒಂದರಂತೊಂದಿಲ್ಲ, ಒಂದರೊಳು ಕುಂದಿಲ್ಲ।

ಈ ವಿಶ್ವರೂಪವ ಕೊರೆದ ವಿಶ್ವಶಿಲ್ಪಿಯು ನೀನು
ನಿನ್ನ ಈ ಮಾಟಕ್ಕೆ ನಮೊ! ನಮೊ! ಎಂಬೆ
ಶ್ರೀ ಸಂಗಮನಾಥ !!

ನಗೆಮೊಗವೆ ಮಹದಾನ !
ಹೃದಯ ಸ್ನೇಹವೆ ಮಾನ !
ಎದೆ ಬಿಚ್ಚಿ ನುಡಿಯುವುದೆ ಕಾಣಿಕೆಯು ಎಂಬೆ !
ಶರಣಗಣ ಸಹವಾಸ ಸಂಪದವು ಎಂಬೆ !
ಸತ್ಯ, ಸಜ್ಜನಿಕೆಯಲಿ ದರ್ಶನವ ಕಾಂಬೆ,
ಅಷ್ಟರಲಿ, ಎಷ್ಟರಲಿ, ನೀನಿತ್ತ ಪ್ರಸಾದ ಫಲವೆಂಬೆ.
ನಿತ್ಯ ಶಿವಯೋಗವಿದೇ !
ಮತ್ತೇನು ಬೇಡಯ್ಯ !
ಉತ್ತಮರ ಊಳಿಗದ ಆಳು ಮಾಡೈ ತಂದೆ.
ಶ್ರೀ ಸಂಗಮನಾಥ !!

ನೆಲ ನೀನು, ಜಲ ನೀನು !
ತರು ನೀನು, ಮರ ನೀನು,
ಗಿರಿ ನೀನು, ಧರೆ ನೀನು, ಬಾಂದಳವು ನೀನು !

ವಿಶ್ವವ್ಯಾಪ್ತಿಯು ನೀನು,
ವಿಶ್ವಚಾಲಕ ನೀನು,
ಜೀವಕೋಟಿಯೊಳಿರುವ ಜೀವಾಳ ನೀನು !!

ಅನುಭಾವ ಸಿರಿ ನೀನು,
ಆನಂದ ಗಿರಿ ನೀನು,
ಭಾವಬ್ರಹ್ಮನ ಸೃಷ್ಟಿ ದೃಷ್ಟಾರ ನೀನು ।

ಕವಿ ನೀನು, ಕಲೆ ನೀನು ।
ಕವಿಯ ಹೃದಯವು ನೀನು
ಹೃದಯವೀಣೆಯನು ಮಿಡಿಸುವವ ನೀನು !!

ನೀನೇ ನೀನೆಲ್ಲವಯ್ಯ ಶ್ರೀ ಸಂಗಮನಾಥ !!

ಕಣ್ಣುಗೊಂಬೆಯಲ್ಲಿ ನಿಮ್ಮ ಕಿರಣ ತುಂಬಲಯ್ಯ
ಹೃದಯದಾಳದಲ್ಲಿ ನಿಮ್ಮ ಕರುಣೆ ಉಕ್ಕಲಯ್ಯ,

ಚಿತ್ತಭಿತ್ತಿಯಲ್ಲಿ ನಿಮ್ಮ ಚಿತ್ರ ಸದಾ ಮೂಡಲಿ
ಮನದ ಮುಂದೆ ನಿಮ್ಮ ರೂಪರಾಶಿ ಸದಾ ನಿಲ್ಲಲಿ.

ಮಾತಿನಲ್ಲಿ, ಮೌನದಲ್ಲಿ ನಿಮ್ಮ ಸೊಬಗು ಇಳಿಯಲಿ !
ನನ್ನದೆಲ್ಲ ನಿಮ್ಮತನಕೆ ಸೋತು ಶರಣು ಎನ್ನಲಿ.

ಎಂದಿನಿಂದ ಬಂದ ಬಯಕೆ ಎಷ್ಟು ಸಾರೆ ಹೇಳಲಯ್ಯ ?

ಬೇನೆ ತಿಂದು ತಿಂದು ನೊಂದೆನಯ್ಯ ಬೆಂದೆನಯ್ಯ !
ಎಂದು ನಾನು ಪಡೆಯುವೆನಯ್ಯ ? ಶ್ರೀ ಸಂಗಮನಾಥ !!

ನೋಡುವ ಕಣ್ಣು ನಿಮ್ಮದಯ್ಯ
ನುಡಿಯುವ ನಾಲಗೆ ನಿಮ್ಮದಯ್ಯ
ಆಡುವ ಮಾತು, ಹಾಡುವ ಹೃದಯವು ನಿಮ್ಮದಯ್ಯ
ನನ್ನದೆಂಬುವುದೇನಿಹುದಯ್ಯ ?
ನೀವು ನನ್ನೊಳಗಿಳಿದು
ನಾನೆಂದು ತೋರುವ ಮಾಟವಿದೆಂಬೆನಯ್ಯ
ಶ್ರೀ ಸಂಗಮನಾಥ, ನಿಮ್ಮಾಟಕ್ಕೆ ಬೆರಗಾದೆನಯ್ಯ ॥

ಮನಮಂದಿರದಲ್ಲಿ ನಿಮ್ಮ ಮಕರಂದ ಸೂಸಲಯ್ಯ,

ಭಾವಗದ್ದುಗೆಯಲ್ಲಿ ನಿಮ್ಮ ಸಿದ್ಧಿ ಕೈಗೂಡಲಯ್ಯ,

ಬುದ್ಧಿಬೆಳಗಿನಲ್ಲಿ ನಿಮ್ಮ ಶುದ್ಧಿ ನೆಲೆಸಲಯ್ಯ,

ಶ್ರೀಸಂಗಮನಾಥ, ಆತ್ಮನಂದಾದೀಪ–
ನಿಮ್ಮ ಜಗುಲಿಯ ಮೇಲೆ ಅನವರತವೂ
ಬೆಳಗುವಂತೆ ಕರುಣಿಸಯ್ಯ ।

ಅಂಗಕ್ಕೆ ನೀರೆರೆದರೆ ಲಿಂಗಮಜ್ಜನವಾಗಲಿ,
ಕಣ್ಣರಳಿ ಕಂಡರೆ ಮಂಗಳ ಮೊಳಗಲಿ।
ಕರುಳುಕ್ಕಿ ನುಡಿದರೆ ನಿಮ್ಮಡಿಗೆ ಹೂ ಪತ್ರಿ ಏರಲಿ,
ಎದೆದುಂಬಿ ಹಾಡಿದರೆ ಕಲ್ಯಾಣಕಳಸ ಕಾಣಲಿ,
ಶರಣರೊಳಗಾಡಿದರೆ ಪರವಶತೆ ಮೈದೋರಲಿ,
ಕಳಕಳಿಯ ಕಲೆಯಾಗಿ ಕಪ್ಪುರಾರತಿ ಬೆಳಗಲಿ,
ಅನವರತ ಕರುಣಿಸು। ಕರುಣಿಸು ತಂದೆ।
ಜರೆಯದಿರು। ಮರೆಯದಿರು।
ಸೆರಗೊಡ್ಡಿ ಬೇಡಿಕೊಳುವೆ ಶ್ರೀ ಸಂಗಮನಾಥ॥

೬೭

ಕೊರಳಿಗೆ ಲಿಂಗ, ಜನಿವಾರ ಹಾಕಿದರೇನು ?
ಹಣೆಗೆ ವಿಭೂತಿ, ತಿಲಕ ಧರಿಸಿದರೇನು ?
ಬಾಯೊಳು ಮಂತ್ರ, ಕೈಯೊಳು ಜಪಮಾಲೆ ಹಿಡಿದರೇನು?

ನಿಮಗಾಗದ ವೇಷಭೂಷಣಗಳು
ಇದ್ದರೇನು ಶಿವ ಶಿವ !
ಇರದಿದ್ದರೇನು ಶಿವ ಶಿವ !

ವೇಷಭೂಷಣದಿ ನೀನಿಳಿದು ಬಾರಾ ಶ್ರೀ ಸಂಗಮನಾಥ !

೭೮

ಗಿರಿಯೇರೆ ಗೊಮ್ಮಟನು,
ಗಿಡನೆರಳ ಗೌತುಮನು,
ಸಿರಿಯೊಡೆಯ ರಕ್ಷಿಸುವ ಗೋವಿಂದನು ।
ಶಿಲುಬೆಗೇರಿದ ಕ್ರೈಸ್ತ,
ಭವಗೆದೆದ ಬಸವ, ಪ್ರಭು, ಮಹದೇವಿಯು
ವರಯೋಗಿ ಅರವಿಂದ ಮಾತಾಜಿಯು
ಸೌಂದರ್ಯ ರಾಜರ್ಷಿ ಕವಿಯು ಟ್ಯಾಗೋರ
ಹರಿ ಹರರು ಅಲ್ಲಾ ! ಎನೆ ಪೈಗಂಬರ ।

ಸ್ವಾತಂತ್ರ್ಯಯುಗಶಿಲ್ಪಿ 'ಬಾಪೂಜಿ,' 'ಬಾ' ನೀನು
ಗುರಿಯೊಂದು ಬಗೆ ಬೇರೆ ಶಿವ-ಶಕ್ತಿ ನೀನು.

ಎರಡು ನದಿಗಳು ಕೂಡಿದೊಡಲ ಕೂಡಲಸಂಗ
ನನ್ನಯ್ಯ, ಜಗದಯ್ಯ, ನೀನೆಲ್ಲವಯ್ಯ ।
ಶ್ರೀ ಸಂಗಮನಾಥ ॥

ಧರ್ಮದ್ದು ಅಂಜಿಕೆಯೊ ? ದೈವದ್ದು ಹೆದರಿಕೆಯೊ ?
ಯಾವ ಭಯದಡಿಯಲ್ಲಿ ಜಗಬಾಳಬೇಕಯ್ಯ !

ಧರ್ಮಕ್ಕೆ ಹೆದರುವುದು ಹಳೆಯ ಮಾತೆಂಬುವರು
ದೈವಕ್ಕೆ ಅಂಜುವುದೆ ? ಈ ದೊಡ್ಡ ಗಡಿಗೆಗೆ ಹತ್ತೆಂಟು ತೂತು.

ಅಂಜಿಕೆಯ ಆಸರೆಯು ಜೀವಕ್ಕೆ ಬಹು ಮುಖ್ಯ
ಯಾವ ಆಶ್ರಯದಲ್ಲಿ ಜಗಬಾಳಬೇಕಯ್ಯ !

ಆಳಲಾಗದ ಸ್ಥಿತಿಗೆ ಅಂಜಲೇಕೆನ್ನುತಿದೆ
ವಿಜ್ಞಾನಯುಗವು ।
ಅಣುಬಾಂಬಿಗಂಜುವುದೆ ಜಗದ ಸ್ಥಿತಿ, ಗತಿಯಾಯ್ತು
ಇದುವೆ ಇಂದಿನ ಮಂತ್ರ
ಇದುವೆ ಇಂದಿನ ತಂತ್ರವೇನಯ್ಯ ?
ಬೇವಿನ ಬೀಜಕ್ಕೆ ಮಾವು ಫಲದೊರೆತೀತೆ ?
ಬಿತ್ತಿದ್ದು ಬೆಳೆಯುವುದು ಸತ್ಯಸಿದ್ಧಾಂತವಯ್ಯ
ವಿಜ್ಞಾನ, ಸುಜ್ಞಾನ, ಅನುಭವಿಸಿ ಹೆದರುತಿದೆ
ಧರ್ಮ, ದೈವದ ನೆರೆಯ ಬೇಡುತಿಹುದಯ್ಯ.
ನೀಡಯ್ಯ । ನೀಡಯ್ಯ ।
ನಿಜಧರ್ಮ, ನಿಜದೈವ, ನಿಮ್ಮನೆರವಿತ್ತೆಮಗೆ
ರಕ್ಷಿಸಯ್ಯ ಶ್ರೀ ಸಂಗಮನಾಥ ।

ಮೃದುವಾದ 'ಸಿಲೆ'ಯೆಂದು
ಮೂರ್ತಿಯ ಮಾಡಿ ಕೆಡಿಸುವದೇನಯ್ಯ ?
ಬೆಳೆದ ಬಿದಿರೆಂದು ಬಣ್ಣದ ಬೆದರು ಹಾಕಿ
ನಂದಿಯ ಕೋಲು ಮಾಡಿ ಕೆಡಿಸುವದೇನಯ್ಯ ?
ನಿಮ್ಮ ಕರುಳಿನ ಕಂದರೆಂದು
ಸಂಸಾರ ಬಿಡಿಸಿ, ಗಿರಿ ಗಂವ್ಹರವ ಸೇರಿಸಿ
ಹೊಗಳಿ, ಹೊಗಳಿ ಕೆಡಿಸುವದೇನಯ್ಯ ?
'ಸಿಲೆ'ಯು ಕದದಾನಿಕೆಯ ಗುಂಡಾಗುವುದೇ
ಕರ ಲೇಸಯ್ಯ ।
ಆಗಾಗ ನಿಮ್ಮ ಶರಣರ ಪಾದಸ್ಪರ್ಶವಾಗದೇನಯ್ಯ ?
ಬಣ್ಣದ ಬೆದರಿನ ನಂದಿಯ ಕೋಲಿಗಿಂತ,
ನಿಮ್ಮಂಗಳದ ಕಸಗೂಡಿಸುವ ಹುಲ್ಲುಕಸಪೊರಕೆ
ಬುಟ್ಟಿಗಳೇ ಕರಲೇಸಯ್ಯ ।
ನಿತ್ಯ ನಿತ್ಯ ಕಾಯಕದಿ
ಕಾಯಕಷ್ಟ ದೊರೆಯುತ್ತಿರಲಿಲ್ಲವೆ ?
ಇಲ್ಲಿ ಇದ್ದು, ಈಸಿ ಜಯಿಸುವ
ಮಾನವರ ಸಹಜಕೃಷಿ
ಪರಮ ಪಾವನಲ್ಲವೇನಯ್ಯ ?
ಇದ್ದು ಈಸುವ ಶಕ್ತಿ ನೀಡಿ ನಮ್ಮನ್ನು ಕಾಪಾಡು
ಶ್ರೀ ಸಂಗಮನಾಥ ॥

'ಕಾಲ ಕೆಟ್ಟಿತು । ಕಾಲ ಕೆಟ್ಟಿತು'
ಎಂದು ಸಿಡಿಮಿಡಿಗೊಳ್ಳುವ ಅಣ್ಣಗಳಿರಾ
ಕೇಳಿರೊ । ಕೇಳಿರೊ ।
ಕಾಲ ಕೆಟ್ಟರೆ ಕೆಡಲಿ,
ಕುಲ ಕೆಟ್ಟರೆ ಕೆಡಲಿ,
ನಾವೆಷ್ಟು ಕೆಟ್ಟಿಹೆವೆಂಬುವುದನು
ಅರಿಯದೆ ಹೋದೆವಲ್ಲ!
ಕಾಲದ ಜಾಲದಲ್ಲಿ ಮೂಲವ ಮರೆಯುವವರನು ಕಂಡು
ಶ್ರೀ ಸಂಗಮನಾಥ ನಗುವನಯ್ಯ!

ನೂರನೋದಲು ಪುಸ್ತಕಗಳುಂಟು,
ನೂರು ಕೇಳಲು ಬಾನುಲಿ ಉಂಟು,
ನೂರನಾಡಲು ಧ್ವನಿವರ್ಧಕಗಳುಂಟು,
ಊರೂರು ತಿರುಗಲು
ಮೋಟಾರ, ವಿಮಾನಗಳುಂಟು.
ಅದರಿಂದಾದ ನಿಲುವೇನು – ಫಲವೇನು ?
ತಿಳಿದವರು ಹೇಳಿರೊ। ಹೇಳಿರೊ।
ಓದು ವಾದಕ್ಕೆ, ಕೇಳುವಿಕೆ ರಂಜನೆಗೆ,
ಮಾತು ಮತಿಗೆಡಿಸಿ,
ಸಂಚಾರ ವಂಚನೆಗೆ ಇಂಬಾಗಿತ್ತು ನೋಡಾ.
ನಿನ್ನೊಳಗಿರದ ಮನ ಏನಾದರೇನು ?
ಎಂತಾದರೇನು ?
ನೂರು ಚಿಂತೆಯ ಚಿತೆಯಲ್ಲಿ
ನೂಕಿ ನಗುತಿಹುದು ನೋಡಾ।
ಬೆಂದು ಬಳಲುವ ಮಂದಮತಿಯನು
ಕೈಹಿಡಿದೆತ್ತಿಕೊಳ್ಳಾ ಶ್ರೀ ಸಂಗಮನಾಥ ॥

ಕಸ್ತೂರಿ ಹಿರಿದೆಂಬುವಿರಿ
ಎರೆಮಣ್ಣು ಸಣ್ಣದೆ ?
ಶ್ರೀಗಂಧ ಹಿರಿದೆಂಬುವಿರಿ
ಹಿರಿಬೇವು ಸಣ್ಣದೆ ?
ಉಳ್ಳವರು ದೊಡ್ಡವರೆಂಬಿರಿ,
ಉಳುವವರು ಸಣ್ಣವರೆ ?
ಈ ದೊಡ್ಡದೆಂಬುವ ಹಂಗು
ಮಂಗನನು ಮಾಡಿ ಕುಣಿಸಿತ್ತು ನೋಡಾ,
ಉಳುವ ನೆಲವೆ, ಹಿರಿದು,
ಉಳುವವನೇ ಹಿರಿಯನು.
ಇಂಥ ಭಾವಸಿದ್ಧಿಯ
ಕರುಣಿಸಿ, ಕಾಪಾಡು ಶ್ರೀ ಸಂಗಮನಾಥ ॥

ಪರಿಜನರ ಮುಟ್ಟಿದಿರಿ,
ಪರಿಜನರ ಕೂಡಿ ಉಂಡಿರಿ, ಆಡಿದಿರಿ,
ನೀವು ತುಂಬುವ ಭಾವಿಯಲಿ ಅವರನ್ನು ಕರೆದಿರಿ,
ಅವರಿಗಾಗಿಯೇ ನೌಕರಿಯ ನೀಡಿದಿರಿ,
ದೇಗುಲಕೆ ಕರೆದಿರಿ,
ಇದರಿಂದಾದ ಫಲವೇನು ಹೇಳುವಿರಾ ಬಾಯ್ಬಿಚ್ಚಿ।
ಮನವಿಲ್ಲದ ಮಾತು,
ಪ್ರೀತಿಯಿರದ ಕೃತಿ,
ಒಡನಾಡದ ನಡವಳಿಕೆ
ಹೇಡದ ಮಡಿಕೆಯ ಹೊರಗೆ ತೊಳೆದಂತಾಗಿತ್ತು-
ನೋಡಾ ಶ್ರೀ ಸಂಗಮನಾಥ ॥

ಶಿಕ್ಷಕನ ಕೆಲಸಕೊಟ್ಟು ನನ್ನನು ರಕ್ಷಿಸಿದೆಯಯ್ಯ ।
ಶಿಕ್ಷಣದ ಕೆಲಸಕ್ಕೆ ಹಚ್ಚಿ ನನ್ನನು ಸುರಕ್ಷಿತವಾಗಿ ಇರಿಸಿದೆಯಯ್ಯ।
ಉಲಿಯುವ ಹಕ್ಕಿಗಳ ಮಧ್ಯದಲ್ಲಿರಿಸಿ
ನಲಿಯುವಂತೆ ಮಾಡಿದೆಯಯ್ಯ ।
ನಾ ಬಡವ । ನಾ ಹುಚ್ಚ । ಇಂದಿನ ಸಮಾಜದಲಿ।
ನಕ್ಕರು ನಕ್ಕರು । ನಗೆಗೀಡಾದೆನಯ್ಯ.

ನಕ್ಕವರೂ, ಮಿಕ್ಕವರೂ ನನ್ನವರಯ್ಯ ।

ಎಲ್ಲರಿಗೂ ನಿನ್ನ ಕಕ್ಕುಲತೆಯನು ನೀಡಿ
ಕರುಣಿಸು ಶ್ರೀ ಸಂಗಮನಾಥ ॥

ಎಪ್ಪತ್ತಾರು

ಸಂಗಮನಾಥನೆ

ಕೊರಗುವ ಕರುಳಿಗೆ,
ತನಿಗಂಪನೀಯುವವ ಲಕ್ಷಕೊಬ್ಬ ।
ಉಣದ ಒಡಲಿಗೆ,
ನಿಜಮನದಿ ಉಣಿಸುವವ ಲಕ್ಷಕೊಬ್ಬ ।
ಕಳಚುವ ಕಂಬನಿಯ,
ತಿಳಿಮನದಿ ಒರಸುವವ ಲಕ್ಷಕೊಬ್ಬ ।
ಪರಹಿತಕಾಗಿ ಹಂಬಲಿಸಿ,
ಕಂಬನಿಯ ಸುರಿಸುವವ ಲಕ್ಷಕೊಬ್ಬ ।
ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ ।
ಲೋಕದ ಕಣ್ಣಿಗೆ ಭಿಕ್ಷುಕನಾತ,
ಬಂಡೆಬ್ಬಿಸುವ ಸಮಾಜದಲಿ–
ಈ ನಂಜುಂಡರನು ನೀನಿರಿಸಿದ ನಿಲುಮೆಯನರಿತು
ಬೆರಗಾದೆನಯ್ಯ ಶ್ರೀ ಸಂಗಮನಾಥ ॥

ಕಾಗೆಗೆ ಹೀಗಳೆಯಲಾರೆ,
ಅದಕೆ ಬಳಗದ ಚಿಂತೆ,
ಪುಲ್ಲಿಗೆ ಕೀಳೆನಲಾರೆ,
ಅದಕೆ ಗೋವುಗಳ ಹಸಿವನಡಗಿಸುವ ಚಿಂತೆ,
ಹಾವಿಗೆ ಕೆಡಕೆನಲಾರೆ,
ಅದಕೆ ಮಾನವರಿಂದ ದೂರಿರುವ ಚಿಂತೆ,
ಸಕಲ ಜೀವಿಗಳಿಗೆ ಲೇಸನೇ ಬಯಸುವ
ಬಲವನ್ನಿತ್ತು ಸಲಹು ಶ್ರೀ ಸಂಗಮನಾಥ ॥

ಉಳ್ಳವರಿಗೆ ಉಣಬಡಿಸುವವರನು ಕಂಡೆ,

ಕಲ್ಲಿಗೆ ಕಮಲವೆಂಬುವವರನು ಕಂಡೆ,

ಒಲ್ಲದ ಕನ್ಯೆಗೆ ವರವನಿತ್ತವರನು ಕಂಡೆ,

ಉಣದವರ, ಕೋಮಲ ಹೃದಯಿಗಳ
ಮೆಟ್ಟಿ ತುಳಿವರು ನೋಡಯ್ಯ ।
ಶ್ರೀ ಸಂಗಮನಾಥ !
ನೀನವರಿಗೆ ಗತಿ, ಮತಿಯನಿತ್ತು
ದಾರಿ ತೋರಯ್ಯ ।

ಮಾತಿನೊಳು 'ಮಾತಂಗಿ' ನೀನಾಗಿ ಬಾರಾ ।
ನೀತಿಯಲಿ 'ಗೀಜಗ'ವು ನೀನಾಗಿ ಬಾರಾ ।
ಖ್ಯಾತಿಯೊಳು 'ಕೊರಕೊಂಚಿ' ಹಿಂಡಾಗಿ ಬಾರಾ ।
ಹೊಗಳಿರುವ ಮುಂಚಿನ 'ಜಾತಕುಲ'ದ ಸ್ಥಳದಲ್ಲಿ
ಈ ಅಜ್ಞಾತ ಬಳಗವನ್ನಿರಿಸಿ
ರಕ್ಷಿಸು ಶ್ರೀ ಸಂಗಮನಾಥ ॥

ಅಗಸಗಿತ್ತಿಗೆ–
ಒಡತಿಯ ಸೀರೆಯನುಟ್ಟ ಹಮ್ಮು,
ಅಧಿಕಾರಿಗೆ–
ಸರಕಾರಿ ನೌಕರಿಯ ಸಿರಿಯ ಹಮ್ಮು,
ಪೂಜಾರಿಗೆ–
ದೇವರ ಸನ್ನಿಧಿಯ ಹಮ್ಮು
ಇಂಥ ಒಣ ಹಮ್ಮು-ಬಿಮ್ಮುಗಳುಳ್ಳವರು
ನಿಮ್ಮನೆತ್ತಬಲ್ಲರು ? ಶ್ರೀ ಸಂಗಮನಾಥ ॥

ಮೊಲೆಹಾಲು ಕುಡಿಸಿದವಳು,
'ಮಳ್ಳರಂಡಿ'ಯಾದಳು ।
ಮೊಲೆಹಿಡಿಸಿಕೊಂಡವಳು
'ಮಾದಾನಿ'ಯಾದಳು
ಕಾಲೇಜದಲ್ಲಿ ಓದುವ ಮಗನಿಗೆ,
ಬುತ್ತಿಹೊತ್ತು ತರುವತಾಯಿ
'ಕೂಲಿ ಆಳಾ'ದಳು ।
'ಕುಂಬಳಕಾಯಿ'ಗಿಂತ 'ಸುಂಬಳಕಾರ'
ಮೆಚ್ಚುಗೆಯಾದ ಪರಿಯನೋಡ
ಈ ಹುಂಬತನವ ಮಾಣಿಸಿ,
ಸಾಕಿ, ಸಲಹು, ಶ್ರೀ ಸಂಗಮನಾಥ ॥

ನೆಲಕೆ ಕುಲವಿಲ್ಲವಯ್ಯ
ನೀರಿಗೆ ಬೆಲೆಯಿಲ್ಲವಯ್ಯ
ಗಾಳಿಗೆ ಗಂಧವಿಲ್ಲವಯ್ಯ
ಬೆಳಕಿಗೆ ರೂಪವಿಲ್ಲವಯ್ಯ
ಇವನಿತ್ತ ದಾನಿ ನೀನು
ನಿನ್ನನೇ ವಂಚಿಸಿದೆವಯ್ಯ
ಶ್ರೀ ಸಂಗಮನಾಥ॥

ಖೊಟ್ಟಿ ನೋಟುಗಳ ಮಾರಾಟವೇ
ಕಾಯಕವಾಯಿತ್ತಯ್ಯ ಕೆಲವರಿಗೆ ।
'ಕಳ್ಳಸಂತೆ'ಯೇ
ಕರ್ಮಯೋಗವಾಯಿತ್ತಯ್ಯ ಕೆಲವರಿಗೆ ।
ಸೆರೆಕುಡಿದು, ಮಾಂಸ ತಿಂದು, ಹಗಲಿರುಳು ಹಲುಬುವದೇ
'ಪರಮಸಾಧನೆ'ಯಾಯಿತ್ತಯ್ಯ ಕೆಲವರಿಗೆ ।
ನಿಮ್ಮ ಸಾಧಕರ ಜರಿದು ಜಜ್ಜಿ ಬಿಡುವುದೇ
ಚಿಂತನೆಯಾಯಿತ್ತಯ್ಯ ಕೆಲವರಿಗೆ
ಇದೇನನೆಂಬೆ ಶ್ರೀ ಸಂಗಮನಾಥ ॥

ಉರಿವ ಕಿಚ್ಚಿಗೆ ಹಸಿರು ಮಡಿಯ ಹೊದಿಸಿದರೆ
ಸುಡದೆ ಬಿಡುವದೇನಯ್ಯ ?
ಅಸೂಯೆ, ಈರ್ಷೆ, ಮದ, ಮತ್ಸರದ ರಕ್ಕಸಗೆ
ಶಾಂತಿಪಠಣ ಮಾಡಿದರೆ
ಕಾಡದೆ ಬಿಡುವನೇನಯ್ಯ ?
ಮಂತ್ರಿಸಿದರೆ ಮಾವಿನಕಾಯಿ ಉದುರದು, ಉದುರದು.
ತಂತ್ರಕ್ಕೆ ತಕ್ಕ ತಂತ್ರವೇ ಮದ್ದು
ಇಂದಿನ ಕಾಲಲೀಲೆಗೆ !
ಅಂಥ ಶಕ್ತಿಯ ನೀಡಿ, ಸಲಹು ಶ್ರೀ ಸಂಗಮನಾಥ ॥

ಊರ ಹೊಲವ ಮೇಯುವ ಗೂಳಿಗೆ,
ಯಾರ ಹೊಲವಾದರೇನು ?
ಎಳೆ ಸಸಿಯು ಬೆಳೆವಲ್ಲಿ,
ತೂತ್ತುಳಿದುಳಿದು ಹೋಯಿತ್ತಯ್ಯ !
ಬೆಳೆ ತಿನ್ನದೆ ಸುಳಿ ಕಡಿದು
ಸೂರೆ ಮಾಡಿತ್ತು ನೋಡ !
ಹಿಂಡಿನೊಳು ಅಂಡಲೆವ
ಭಂಡತನವ ನೋಡ ।
ಕಾಲು ಕೆದರಿ, ಘುರಕಿ ಹೊಡೆದು,
ಧೂಳಿಯೆಬ್ಬಿಸುವ ಪರಿಯ ನೋಡ !

ಹಿಡಿದು, ಹಗ್ಗವ ಬಿಗಿದು, ಕಾಲಕಡಗವ ಹಾಕಿ
ನಿನ್ನಂಗಳದಿ ನಿಲುವಂತೆ ಮಾಡು ಶ್ರೀ ಸಂಗಮನಾಥ ॥

ದಯೆಯುಳ್ಳ ಧರ್ಮಿಷ್ಠನ ಕಂಡೆನಯ್ಯ ಕಂಡೆನು !
ಕರುಳರಿತ, ಹುರುಳುಳ್ಳ ಕಾಯಕ ಜೀವಿಯ ಕಂಡೆನಯ್ಯ ಕಂಡೆನು!
ಉಣ್ಣದವರ ನೋವನರಿತ ಅಣ್ಣನನು ಕಂಡೆನಯ್ಯ ಕಂಡೆನು
ಪ್ರಶಾಂತ ಮನದ, ಶಶಿಕಾಂತನಂತೆ ಹೊಳೆಯುವ ಕಂಗಳ
ಕಂಡೆನಯ್ಯ ಕಂಡೆನು !
ಬಿಡುಜಡೆಯ, ನೀಳದಾಡಿಯ, ನಿರ್ಮಮಯೋಗಿಯ
ಕಂಡೆನಯ್ಯ ಕಂಡೆನು !
ಎನ್ನಮನದ ಕಳವಳ ಕಳೆದು
'ಮಗುವೇ ಬಾ' ಎಂದು
ಕರವಿಡಿದೆತ್ತಿಕೊಂಡನಯ್ಯ ಆ ಜಂಗಮನು ।
ಅವನನ್ನೇ ಶ್ರೀ ಸಂಗಮನಾಥನೆಂಬೆ,

ಉತ್ಸವದೊಳು ಉತ್ಸಾಹ ವ್ಯಯವಾಗುತ್ತಿದೆಯಯ್ಯ
ಸಭೆ, ಸಮಾರಂಭ, ಸಿನೇಮಾ, ನಾಟಕಗಳಿಗಾಗಿ
ವೇಳೆ ವ್ಯಯವಾಗುತ್ತಿದೆಯಯ್ಯ ।
ಹೊಟ್ಟೆಪಾಡಿಗಾಗಿ ಕಂಡವರ ಹೊಗಳಿ ಹೊಗಳಿ,
ನೀತಿ ವ್ಯಯವಾಗುತ್ತಿದೆಯಯ್ಯ ।
ದ್ವೇಷ, ಮತ್ಸರ, ಮುಂಗೋಪಗಳಿಗೆ ಬಲಿಯಾಗಿ,
ಪಕ್ಷ ಪಂಗಡಗಳನು ಹುಟ್ಟಿಸಿ,
ಮತಿ ವ್ಯಯವಾಗುತ್ತಿದೆಯಯ್ಯ ।
ಸಿಕ್ಕದ್ದು ಅನುಸರಿಸಿ, ಅಂಡಲೆವ ಫ್ಯಾಶನ್ನಿಗೆ ಮೆಚ್ಚಿ
ಸಂಸ್ಕೃತಿ ವ್ಯಯವಾಗುತ್ತಿದೆಯಯ್ಯ
ಗುರಿಯಿರದ ದಾರಿಯಲಿ ಜಗ ನಡೆದು
ಆಯುಷ್ಯ ವ್ಯಯವಾಗುತ್ತಿದೆಯಯ್ಯ ।
ಮನಬರಿದು, ತನುಬರಿದು,
ಜೀವ ಕಂಗೆಟ್ಟಿದೆಯಯ್ಯ
ಮನತುಂಬಿಸು ! ತನುತುಂಬಿಸು !
ಕೈಹಿಡಿದು ಸಾಗಿಸು ಶ್ರೀ ಸಂಗಮನಾಥ ॥

ಈಜಿದೆವು ಮೀನವಾಗಿ,
ಹಾರುವೆವು ಪಕ್ಕಿಯಾಗಿ,
ಬಾಂದಳವ ಅಡಿಯಿಟ್ಟು ಅಳೆದು ಬಿಡುತಿಹೆವು!
ಕಡಲ ಅಡಿಯನೆ ಮುಟ್ಟಿ ಆಡುತಿಹೆವು !

ನೆರೆಮನೆಯ ಬಾಂಧವರ ಒಡನಾಟವಿಲ್ಲ,
ಈರ್ಷೆ, ದ್ವೇಷದ ವಿಷವ ಕುಡಿದು ಕುಡಿದು.
ವೈರ, ಮತ್ಸರದಲ್ಲಿ ಮೈ ಮರೆಯುತಿಹೆವು.

ಹಿಂಸೆ, ತಾಂಡವನೃತ್ಯ ನಡೆಸಿರುವೆವಲ್ಲ !
ವಿಜ್ಞಾನಯುಗದಲ್ಲಿ ಕತ್ತಲೆಯ ರಾತ್ರಿಯೆ ?
ಎತ್ತ ಹೋದರೂ ಇಲ್ಲ ಶಾಂತಿ–ಸಮತೆ !
ಜೀವ–ಜೀವಕೆ–ಇಳಿಯದೇನಯ್ಯ ಮಮತೆ ?

ಸುಜ್ಞಾನದಡಿಯಲ್ಲಿ ವಿಜ್ಞಾನವಾಗಿ,
ಶಾಂತಿ ಸಮತೆಗೆ ದಾರಿದೀಪ ನೀನಾಗಿ,
ಜಗಕೆ ನಂದಾದೀಪ ಬೆಳಗಿಸಯ್ಯ
ಶ್ರೀ ಸಂಗಮನಾಥ !!

ಎತ್ತ ನೋಡಿದಡತ್ತ ಒಕ್ಕೊರಲಿನೊಳ ಕೊರಗು,
'ನಮಗಿಲ್ಲ ನಮಗಿಲ್ಲ'ವೆಂಬುವುದು
ಎಲ್ಲಿ ನೋಡಿದಡಲ್ಲಿ ಬೊಬ್ಬಾಟದಾ ಸೋಗು
'ಇನ್ನಷ್ಟು ಇನ್ನಷ್ಟು' ಬೇಕು ಎಂಬುವುದು

ದುಡಿದವರಿಗೆ ಹೊಟ್ಟೆಯ ಕೊರಗು,
ಪಡೆವವರಿಗೆ ಸಂಗ್ರಹದ ಪಿಡುಗು,
ಕೊರಗಿಂದು ಕಡಲಿನಾರ್ಭಟದಂತೆ ಕಿರುಚುತಿದೆಯಯ್ಯ.

ನವ ಭಾರತದ ನೀತಿ,
ಹರಿದು ತಿನ್ನುವುದೆ? ಹಂಚಿ ಉಣ್ಣುವುದೇ?
ಹಿಂಡು ಹೊಲೆಯರು ಕೂಡಿ
ತೊಗಲು ಹದಗೆಡಿಸಿದ ಪರಿಯ ನೋಡಯ್ಯ.
'ನಾ'ನಾಳಬೇಕೆಂಬ ಹುಚ್ಚು ಭ್ರಮೆಯ
ಮೆಚ್ಚುವೆಯೇನಯ್ಯ?
ನನ್ನವರೊಂದಿಗೆ ನಾನುಳಿಯಬೇಕು,
ಜಗ್ಗ ಬಾಳಬೇಕು.
ನಿನ್ನವರೊಂದಿಗೆ ನಾನೊಂದಾಗಬೇಕು ಚಂದಾಗಬೇಕೆಂಬ
ನಿಮ್ಮ ಡಂಗುರ ಕಿವಿಗಡಚಿಕ್ಕಲಯ್ಯ ಶ್ರೀ ಸಂಗಮನಾಥ॥

ಊಟಕ್ಕಿಂತ ನೋಟಕ್ಕೆ ವೆಚ್ಚವು ಹೆಚ್ಚಾಯಿತಯ್ಯ!
ನೋಟಕ್ಕಿಂತ ಮಾಟಕ್ಕೆ ವೆಚ್ಚವು ಹೆಚ್ಚಾಯಿತಯ್ಯ
ಮಾಟಕ್ಕಿಂತ ದುರ್ವ್ಯಸನಕ್ಕಾಗಿ ಹಣವು ನೀರಿನಂತೆ-
ವ್ಯಯವಾಗುತ್ತಿದೆಯಯ್ಯ,
ಆತ್ಮಾನಂದಕ್ಕಾಗಿ ವೆಚ್ಚವಾಗುವ ಹಣದ ಲೆಕ್ಕವೆನಿತಯ್ಯ,
ಈ ಲೆಕ್ಕವನು ಲೆಕ್ಕಾಚಾರಕ್ಕಿಳಿಸು ಬಾರಾ ಶ್ರೀ ಸಂಗಮನಾಥ.

ತಲೆಗೊಂದು ಮತಾಧಿಕಾರವಿದ್ದರೇನು,
ತಲೆತುರಿಸದಿದ್ದರೆ ?
ಮನೆಗೊಂದು ಹಿರಿ ಆಸ್ತಿ ಇದ್ದರೇನು,
ದಾವದ ಮನಸಿರದಿದ್ದರೆ ?
ಕುಲ ಕುಲಕೆ ದೀಪ ಕೊಟ್ಟರೇನು,
ಕಣ್ಣಿನ ಮಂಜ ನಳಿಯದಿದ್ದರೆ ?
ನೆಲಕೊಂದು ಶಕ್ತಿ ಕೊಟ್ಟರೇನು ?
ನಿಮ್ಮ ಆಸಕ್ತಿ ಬೆಳೆಯದಿದ್ದರೆ ॥
ಜಗಕೊಂದು ಯುಕ್ತಿ ಕೊಟ್ಟರೇನು ?
ಶಾಂತಿ, ಸಮತೆ ಇಳಿಯದಿದ್ದರೆ ?
ಕೊಟ್ಟದ್ದು ಮುಟ್ಟಿಸುವ ಗುಣವಿರದಿದ್ದರೆ–
ನಾವು ಕೆಟ್ಟೆವಯ್ಯ ಶ್ರೀ ಸಂಗಮನಾಥ ॥

ಊರಿಗೊಂದು ಮನೆಕಟ್ಟಿದರೇನಯ್ಯ–
ಮನಕಟ್ಟದೆ;
ದಾರಿಗೊಂದು ಛತ್ರ ಇಡಿಸಿದರೇನಯ್ಯ–
ವೈರವಳಿಯದೆ,
ನಾಡಿಗೊಂದು ಹೆಸರುಪಡೆದರೇನಯ್ಯ–
ಹೃದಯಣೆಲ್ಲದೆ ।
'ಏನಕೇರೇಣ ಕಾರ್ಯಕ್ಕೆ ಏನಕೇರೇಣ ಪದವಿ'
ದೊರೆತವಯ್ಯ ।
ಬೆಳಗಿನೊಳು ಕಂಡ ಬಾವಿಯನು
ಕತ್ತಲೊಳು ಬಿದ್ದಂತಾಯಿತಯ್ಯ,
ಮನಕಟ್ಟಿ, ಎದೆಕಟ್ಟಿ,
ಹೃದಯದೊಳಿಳಿದು ಬಾರಾ ಶ್ರೀ ಸಂಗಮನಾಥ ॥

ಆಸೆಯ ಬಿಸಿಯುಸಿರಿಗಿಂತ,
ನಿರಾಶೆಯನಿಟ್ಟುಸಿರು ಘೋರವಯ್ಯ !
ಉಂಡ ಉಪವಾಸಿಗಿಂತ,
ಉಣದ ಒಡವನ ತಾಪ ಘೋರವಯ್ಯ !
ಅನುಭವದ ಆಚರಣೆಗಿಂತ
ಅನನುಭವಿಯ ಸ್ಥಿತಿ ಘೋರವಯ್ಯ !
ಕಾಣೆನೆನ್ನುವ ಮನಕ್ಕಿಂತ
ಕಂಡೆನೆನ್ನುವ ಜಂಭ ಬಲುಘೋರವಯ್ಯ

ಶ್ರೀ ಸಂಗಮನಾಥ ! ನಿಮ್ಮ ಅರುವಿನ ಬಳಲಿಕೆಗಿಂತ,
ಮರವಿನ ಪರಿತಾಪ ಘೋರ ಘೋರವಯ್ಯ !

'ಡಬ್ಬುಗಳ್ಳಿ'ಯ ಗುಂಫಿನೊಳು
ಮಧುಕರನ ಸಿರಿಹುಟ್ಟು !

ಬೇಡರಲೆಯುವ ಕಾಡಿನೊಳು,
ಗೀಜಗದ ಕಲೆಗೂಡು !

ದೂರ ದುರ್ಜನರ ನೆರೆಯಲ್ಲಿ
ಸಾರ ಸಜ್ಜನ ಶರಣರಾಶ್ರಮವಯ್ಯ !

ನೂರೆಂಟು ವಿಕಾರಗಳ ಬೆಂಕಿಯೆದೆಗುದಿಯಲ್ಲಿ,
ಹೃದಯುದರವಿಂದನನು ಅರಳಿಸುವ ಪರಿನೋಡಾ !

ಶ್ರೀ ಸಂಗಮನಾಥ !
ನಿಮ್ಮ ವಾತ್ಸಲ್ಯಕ್ಕೆ ನಮೊ ! ನಮೊ ! ನಮೊ !!

ಕಾರ ಹುಣ್ಣಿಮೆಯಲ್ಲಿ ಕತ್ತೆಯನು ಹಿಡತಂದು
ಮೈದೊಳೆದು, ಸರಗಂಟೆಕಟ್ಟಿ 'ಕರಿ' ಹರಿಯ ಬಹುದೇನಯ್ಯ,

ನಾಯಿಯನು ಉತ್ಸವಕೆ ಹಿಡತಂದು,
ಪಲ್ಲಕ್ಕಿಯಲಿ ಕುತನಿಯ ಗಾದಿಯನು ಹಾಸಿ,
ಪೂಜಿಸಿ ಮೆರವಣಿಗೆ ತೆಗೆಯಬಹುದೇನಯ್ಯ !

ಬಹುಮತದಿ ಆಯ್ಕೆಯಾದರೇನು ?
ಮತದ ಹಂಗು, ಮಂಗತನವ ಮಾಡಿಸಬಹುದೇನಯ್ಯ !

ನಿಮ್ಮ ದರ್ಶನ ಸ್ಪರ್ಶನದಿಂದ
ಜನುಮ ಜನುಮದ ಹೀನಗುಣಂಗಳನು ತರಹರಿಸಿ,
ವರವಿತ್ತು, ಮಡಿಗೊಳಿಸಿ, ಸಾಕಿಸಲಹು ಶ್ರೀ ಸಂಗಮನಾಥ ॥

೯೭

ಹುಲಿ, ಮಾಂಸ ತಿನುವುದಲ್ಲದೆ,
ಹುಲ್ಲು ತಿನ್ನುವದೇನಯ್ಯ ?
ಆನೆ, ಕಬ್ಬು ಮೇಯುವದಲ್ಲದೆ,
ಮಾಂಸ ತಿನ್ನದು ನೋಡ !
ಹುಲಿ, ಹುಲ್ಲು ತಿಂದರೆ ವಿಚಿತ್ರವಲ್ಲವೆ ?
ಆನೆ, ಮಾಂಸ ತಿಂದರೆ ವಿಚಿತ್ರವಲ್ಲವೆ ?
ನೀವಿರದ ಬಾಳಿನಲಿ
ಈಚಿತ್ರ ವಿಚಿತ್ರ ನಡೆಯಿತು ನೋಡಯ್ಯ !
ವಿಚಿತ್ರವ ಸುಚಿತ್ರವಾಗಿರಿಸು ಶ್ರೀ ಸಂಗಮನಾಥ ॥

೯೭

ಚಹಾ, ಕಾಫಿ ಕುಡಿಯುವ ಬಾಯಿಗೆ.
ಹಾಲು ರುಚಿಸೀತೆ ?
ಉಪ್ಪಿಟ್ಟು, ದೋಸೆ ತಿನುವ ಬಾಯಿಗೆ.
ಮೃಷ್ಟಾನ್ನ ರುಚಿಸೀತೆ ?
ತನ್ನವರನು ಹೊಗಳುವ ನಾಲಗೆ ?
ನಿಮ್ಮವರನು ಹೊಗಳೀತೆ
ಉಣುವ ಬಾಯಿಗೆ, ಹೊಗಳುವ ನಾಲಗೆಗೆ
ನಿಮ್ಮ ಪ್ರಸಾದವನಿಕ್ಕಿ ಸಾಕಿ ಸಲಹು ಶ್ರೀ ಸಂಗಮನಾಥ ॥

ಅಲ್ಲದುದನು ಅರಸುವುದೆಂದು,
ಕಣ್ಣು ಕಿತ್ತುವರೇನಯ್ಯ ?

ಸಲ್ಲದುದನು ನುಡಿಯುವುದೆಂದು,
ನಾಲಗೆಯ ಸೀಳುವರೇನಯ್ಯ ?

ಒಲ್ಲದುದನು ಕೇಳುವದೆಂದು
ಕಿವಿಯ ಕತ್ತರಿಸುವರೇನಯ್ಯ ?

ಮೆಲ್ಲದುದನು ಉಂಬುವದೆಂದು
ಬಾಯಿಗೆ ಬಡಿಯುವರೇನಯ್ಯ ?

ಹುತ್ತು ಬಡಿದರೆ ಹಾವು ಸಾಯದು ನೋಡಯ್ಯ,
ಒಡೆಯ ಮಾಡಿದ ತಪ್ಪಿಗೆ,
ಬಡ ನೌಕರನ ದಂಡಿಸಿದಂತಾಗಿತ್ತಯ್ಯ ।

ಮನ, ಬುದ್ಧಿ, ಭಾವಗಳ ಶುದ್ಧಿಗಾಗಿ,
ಮದ್ದು ನೀಡಿ, ತಿದ್ದಿ-ತೀಡು ಶ್ರೀ ಸಂಗಮನಾಥ.

ಹದ್ದು ಗಗನಕ್ಕೇ ಗೆರೆ ಕೊರೆದರೂ
ಹೆಣವ ನರಸುವುದು ಬಿಟ್ಟೀತೆ ?
ನಾಯಿ ಸುಖದ ಸುಪ್ಪತ್ತಿಗೆಯಲ್ಲಿ ಮಲಗಿದರೂ
ಮಲವ ಮೂಸದೆ ಬಿಟ್ಟೀತೆ ?
ಬೆಕ್ಕು ಅರಮನೆಯಲ್ಲಿ ಮೆರೆದರೂ
ಇಲಿಯ ಕಾಣದೆ ಬಿಟ್ಟೀತೆ ?
ಹುಟ್ಟುಗುಣ ಸುಟ್ಟರೆ ಹೋಗುವದೇನಯ್ಯ ?

ಕೆಟ್ಟ ಬೇರನ್ನು ಕಿತ್ತು ಕಸಿಮಾಡುವ
ಸೃಷ್ಟಿಕರ್ತ ಶ್ರೀ ಸಂಗಮನಾಥ

ನಿಮ್ಮ ಹಸ್ತ ಮುಟ್ಟಿದ ಜೀವಿಗೆ
ಹುಟ್ಟಿಲ್ಲ, ಸಾವಿಲ್ಲ, ನೋಡಯ್ಯ ॥

'ಸ್ವಾತಂತ್ರ್ಯ ! ಸ್ವಾತಂತ್ರ್ಯ !' ಎಂದು ಗುಲ್ಲೆಬ್ಬಿಸುವ
ಮಹಿಳೆಯರೆ ! ಕೇಳುವಿರೇನವ್ವ ?
ಬಾಯಿಬಿಟ್ಟು ಮಾತನಾಡುವುದು, ಸ್ವಾತಂತ್ರ್ಯವೆ ?
ಕೈಯ್ಯಬಿಟ್ಟು ತಿರುಗುವುದು, ಸ್ವಾತಂತ್ರ್ಯವೆ ?
ನಿಯಮ ಮರೆತು ನಲಿಯುವುದು, ಸಾತಂತ್ರ್ಯವೆ ?
'ಸೀತೆ,' 'ದ್ರೌಪತಿ'ಯರಿಗೆ ಸ್ವಾತಂತ್ರ್ಯವಿರಲಿಲ್ಲವೆ ?
'ಬಾ' 'ಶಾರದಾ' ಮಾತೆಯರಿಗೆ ಸ್ವಾತಂತ್ರ್ಯವಿರಲಿಲ್ಲವೆ?

ಮೂಗುತಿಯ ಬಿಚ್ಚಿ, ಬಳೆಗಳನು ಕಳಚಿ,
ಕೈ ಹಿಡಿದ ಗಂಡನನು ಕಡೆಗಣಿಸಿ,
ಬಂಧನವ ಕಳಚಿದೆವೆಂಬ ನುಡಿ,
ಸಲ್ಲುವುದೇ ಅವ್ವಗಳಿರಾ ।
ಮಲ್ಲಿಗೆಯ ಬಳ್ಳಿ ಪಲ್ಲವಿಸೆ
ಸಲ್ಲುವ ಹಂದರ ಬೇಡವೆ ?
ನನೆಕೊನೆಯೇರಿ, ದಾಂಗುಡಿಗಟ್ಟಿ ಮಗ ಮುಗಿಸಲು,
ನೆಲದ ನೆರೆ ಬೇಡವೆ ?
ನಿಜದ ನಿಲುಮೆಯೇ ಸ್ವಾತಂತ್ರ್ಯ !
ನಿಶ್ಚಲ ಮನವೇ ಸ್ವಾತಂತ್ರ್ಯ !
ಬೇಡಿಕೊಂಡರೆ–ಸಕಲ ಸ್ವಾತಂತ್ರ್ಯವನಿತ್ತು ಪೊರೆವ
ಶ್ರೀ ಸಂಗಮನಾಥ !!

ಸಂಗಮದ ಅಂಗಳದ ಐಸಿರಿಯ ನೋಡಯ್ಯ !
ದೆಸೆ ದೆಸೆಗೆ ಬೆಳಗುತಿವೆ ದೀಪ ಗಂಬ !
ಬಣ್ಣ ಬಣ್ಣದ ಬೆಳಗು ಬೆಳಕುತುಂಬ ।

ವೈರಾಗ್ಯ ನಿಧಿ ವೀರ 'ವಿಜಯ ಮಹಂತನ' ಬೆಳಕು !
'ಸಜ್ಜಲದ ಗಿರಿ ಮಾತೆ' ಹೃದಯ ಬೆಳಗುವ ಬೆಳಕು,
'ಶಿವಯೋಗ ಮಂದಿರ'ದ ಚಂದಿರನ ಸಿರಿ ಬೆಳಕು,
'ಸಿದ್ಧಲಿಂಗ'ನ ಕಾಂತಿ, ಶಾಂತಿ ಬೆಳಕು,
ಕೂಡಲದ ಒಡಲಲ್ಲಿ ಮೆರೆವ ಶರಣರ ಬೆಳಕು,
'ಬೆಳಕು ಬೆಳಗೊಂಬಸಿರ' 'ಕೂಡಲದ ಸಂಗಯ್ಯ !
ಜಗದೆದೆಯ ಬೆಳಗಿಸಯ್ಯ ! ಶ್ರೀ ಸಂಗಮನಾಥ !!



 

□ □ □

ಹುಬ್ಬಳ್ಳಿ ಮೂರುಸಾವಿರಮಠದ

## ಶ್ರೀ ಜಗದ್ಗುರುಗಳವರ ಆಶೀರ್ವಚನ

---

ನೀ ಬರೆದ ನೂರೊಂದು ವಚನಗಳು,
ನುಡಿ ಮುತ್ತುಗಳಂತಿಹವಯ್ಯ !
ಬಡ ಶಿಕ್ಷಕನಾದರೇನಂತೆ,
ಭಕ್ತಿಗೆ ಬಡತನ, ಸಿರಿತನವುಂಟೆ ?
ಪರಿಮಳ ಬೀರುವ ಪುಷ್ಪವೆಲ್ಲಿದ್ದರೇನಂತೆ ?
ಸೌಗಂಧ ಬೀರುವುದು ಬಿಡುವದೆ ?
ಭಾವ ಪುಷ್ಪವರಳಿಸಿ ವಚನ ರಚಿಸಿದ ನಿನಗೆ,
ಕಾರುಣ್ಯಕಿರಣವ ಕರುಣಿಸದೆ ಬಿಡುವನೆ !
ಭ್ರೂಲತಾಪುರೀಶವಾಸ ಕರ್ತೃ ಜಗದ್ಗುರು

ಗುರುಸಿದ್ಧೇಶ್ವರ !!

□ □ □